

ಕರ್ನಾಟಕ ಸರ್ಕಾರ

# ಸಿರಿ ಕನ್ನಡ

## ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ

(ಪರಿಷ್ಕೃತ)






## ಏಳನೆಯ ತರಗತಿ

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**

ನಂ. ೪, ೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ಮೂರನೆಯ ಹಂತ,
ಬೆಂಗಳೂರು – ೫೬೦೦೮೫

## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು :**

**ಶ್ರೀ ಶಿವಲಿಂಗಯ್ಯ**

ನಿವೃತ್ತ ಜಂಟಿ ನಿರ್ದೇಶಕರು, ನಂ ೩೩, ೧೦ನೇ ಮುಖ್ಯ ರಸ್ತೆ, ಹಂಪಿ ನಗರ, ಬೆಂಗಳೂರು.

**ಸದಸ್ಯರು :**

**ಶ್ರೀ ಕೆ.ಬಿ. ಕೆಂಡಗಣ್ಣಸ್ವಾಮಿ,** ಸಹಶಿಕ್ಷಕರು, ಸರ್ಕಾರಿ ಪ.ಪೂ. ಕಾಲೇಜು, ಮೆಣಸೀಕ್ಯಾತನಹಳ್ಳಿ, ಟಿ.ನರಸೀಪುರ, ಮೈಸೂರು.

**ಶ್ರೀಮತಿ ಬಿ. ಕೆ. ಧನಲಕ್ಷ್ಮೀ,** ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಬ್ರಹ್ಮಾವರ, ಉಡುಪಿ ಜಿಲ್ಲೆ.

**ಶ್ರೀಮತಿ ಮೀನಾಕ್ಷಿ ಎಸ್. ಹಿರೇಮಠ,** ಸಹಶಿಕ್ಷಕರು, ಕರ್ನಾಟಕ ಯೂನಿವರ್ಸಿಟಿ ಪಬ್ಲಿಕ್ ಸ್ಕೂಲ್, ಕೆ.ಸಿ.ಡಿ. ರಸ್ತೆ, ಧಾರವಾಡ.

**ಶ್ರೀಮತಿ ಕೆ. ಎಸ್. ರಮಾಮಣಿ,** ನಿವೃತ್ತ ಶಿಕ್ಷಕಿ, ಶ್ರೀ ರಾಮದೇವಾಲಯ ರಸ್ತೆ, ಕೋಟೆ, ಹೊಳೆನರಸೀಪುರ, ಹಾಸನ ಜಿಲ್ಲೆ.

**ಶ್ರೀ ಪರಮೇಶ್ವರ ಎಂ. ನಿಂಬರ್ಗಾ,** ಸಹ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಹುಣಸಿ ಹಡಗಿಲ, ಕಲಬುರಗಿ ತಾ. (ದಕ್ಷಿಣ)

**ಶ್ರೀ ಪಿ.ಎ.ಬಿ. ಈಶ್ವರ,** ಚಿತ್ರಕಲಾ ಶಿಕ್ಷಕರು, ಹಮ್ದರ್ದ್ ಪ್ರೌಢಶಾಲೆ, ರಾಯಚೂರು.

**ಪರಿಶೀಲಕರು :**

**ಶ್ರೀ ಪ್ರಕಾಶ್ ಬೂಸನೂರು,** ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಂ.೫೫, 'ಸೂರಜ್' ನಿಜಲಿಂಗಪ್ಪ ಲೇಔಟ್, ದಾವಣಗೆರೆ.

**ಸಂಪಾದಕ ಮಂಡಳಿ ಸದಸ್ಯರು :**

೧. **ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ.ನಗರ, ಬೆಂಗಳೂರು

೨. **ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ. ೧೩೭, ೧೨ ನೇ ಕ್ರಾಸ್, ಜೆ.ಪಿ, ನಗರ, ೨ನೇ ಹಂತ, ಬೆಂಗಳೂರು

೩. **ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

೪. **ಪ್ರೊ. ಅ.ರಾ. ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

೫. **ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ.

**ಮುಖ್ಯ ಸಂಯೋಜಕರು :**

**ಪ್ರೊ. ಜಿ.ಎಸ್. ಮುಡಂಬಡಿತ್ತಾಯ,**

ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ) ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ :**

೧. **ಶ್ರೀ ನಾಗೇಂದ್ರ ಕುಮಾರ್** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

೨. **ಶ್ರೀಮತಿ ಸಿ. ನಾಗಮಣಿ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು :**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

# ಮುನ್ನುಡಿ

೨೦೦೫ ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೫ ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೬ ರಿಂದ ೧೦ ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach), ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾ ಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರ ಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ

ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಕೆಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-೮೫.

**ನಾಗೇಂದ್ರಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-೮೫.

# ನುಡಿ ನಮನ

೨೦೧೨ – ೧೩ ನೆಯ ಶೈಕ್ಷಣಿಕ ವರ್ಷದಿಂದ ಕರ್ನಾಟಕ ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಿಗೆ ಹೊಸ ಪಠ್ಯ ಪುಸ್ತಕಗಳನ್ನು ಪರಿಚಯಿಸಲಾಗುತ್ತಿದೆ. ಇದರ ಅಂಗವಾಗಿ ಸಿದ್ಧಗೊಂಡಿರುವ ಏಳನೇ ತರಗತಿ ದ್ವಿತೀಯ ಭಾಷಾ ಪಠ್ಯಪುಸ್ತಕ ಇದಾಗಿರುತ್ತದೆ. ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ಮೂರು ಭಾಷಾ ಸೂತ್ರವನ್ನು (ತ್ರಿಭಾಷಾ ಸೂತ್ರ) ಜಾರಿಗೊಳಿಸಿರುವುದಲ್ಲದೆ ಕನ್ನಡೇತರ ಮಾತೃಭಾಷಿಕರು ಕನ್ನಡವನ್ನು ದ್ವಿತೀಯ ಇಲ್ಲವೇ ತೃತೀಯ ಭಾಷೆಯಾಗಿ ಕಲಿಯುವ ಅವಕಾಶವನ್ನು ಕಲ್ಪಿಸಲಾಗಿದೆ.

ಇದರ ಮೂಲಕ ಸಮಸ್ತ ಕನ್ನಡಿಗರೊಂದಿಗೆ ಹೊಂದಿಕೊಂಡು ಬಾಳಲು ಕನ್ನಡವನ್ನು ಎಲ್ಲ ರಂಗಗಳಲ್ಲಿಯೂ ಸೂಕ್ತವಾಗಿ ಬಳಸುವ ಸಾಮರ್ಥ್ಯವನ್ನು ಪಡೆಯಲೆಂಬ ಭಾವನೆಯಿಂದ ಹಿರಿಯ ಪ್ರಾಥಮಿಕ ತರಗತಿಗಳಲ್ಲಿ ಕನ್ನಡವನ್ನು ಕಲಿಸುವ ಅವಕಾಶವನ್ನು ಕಲ್ಪಿಸಲಾಗಿದೆ. ಈ ಪಠ್ಯ ಪುಸ್ತಕವು ೨೦೦೫ ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಮಾರ್ಗದರ್ಶನಕ್ಕೆ ಅನುಗುಣವಾಗಿ ಸಾಮರ್ಥ್ಯ ಆಧಾರಿತವಾಗಿದೆ. ಜೊತೆಗೆ ಪಠ್ಯ ವಿಷಯವು ಕನ್ನಡ ನಾಡು, ನುಡಿ, ಸಂಸ್ಕೃತಿಯ ಅಂಶಗಳನ್ನು ಒಳಗೊಂಡಿದೆ.

೨೦೦೫ ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಲ್ಲಿ 'ಮಗುವು ಜ್ಞಾನವನ್ನು ತಾನೇ ರಚಿಸಿಕೊಳ್ಳುತ್ತದೆ ಎಂಬ ಅಂಶವನ್ನು ಆಧರಿಸಿ ಪಠ್ಯಕ್ರಮ, ಪಠ್ಯವಸ್ತು ಮತ್ತು ಪಠ್ಯಪುಸ್ತಕಗಳ ರಚನೆ ಆಗಬೇಕು ಮತ್ತು ಶಿಕ್ಷಕರು ತರಗತಿಯ ಅನುಭವಗಳನ್ನು ಮಗುವಿನ ಸ್ವಭಾವ ಮತ್ತು ಪರಿಸರ ಇವಕ್ಕೆ ಸರಿ ಹೊಂದುವಂತೆ ರಚಿಸಬೇಕು ಮತ್ತು ಎಲ್ಲ ಮಕ್ಕಳಿಗೂ ಕಲಿಯಲು ಸಮಾನ ಅವಕಾಶವನ್ನು ಹೊದಗಿಸಬೇಕು ಎಂಬುದನ್ನು ಸೂಚಿಸುತ್ತದೆ. ಕಲಿಯಬೇಕೆಂಬ ಮಗುವಿನ ಸಹಜ ಆಸೆ ಮತ್ತು ಅದರ ಕಲಿಕೆಯ ತಂತ್ರಗಳನ್ನು ವೃದ್ಧಿಸುವುದೂ ಸಹ ಇದರ ಗುರಿಯಾಗಿರಬೇಕು ಎಂಬ ಅಂಶವನ್ನು ಪ್ರಸ್ತಾಪಿಸಿದೆ. ಸದರಿ ಉದ್ದೇಶ ಮತ್ತು ಗುರಿಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕವನ್ನು ರಚಿಸಲಾಗಿದೆ.

ಪಠ್ಯಪುಸ್ತಕ ರಚನೆಯಲ್ಲಿ ಅಖಂಡ ಕರ್ನಾಟಕದ ಕಲ್ಪನೆಯನ್ನು ಗಮನದಲ್ಲಿಟ್ಟುಕೊಂಡು ಬಹುಪಾಲು ಕರ್ನಾಟಕದ ಎಲ್ಲ ಪ್ರಾಂತ್ಯಗಳಿಗೂ ಆದ್ಯತೆ ನೀಡಲು ಪ್ರಯತ್ನಿಸಲಾಗಿದೆ. ಸಾಹಿತ್ಯಾತ್ಮಕವಾಗಿ ಗಮನಿಸಿದಾಗ ಗದ್ಯ ಮತ್ತು ಪದ್ಯ ಈ ಎರಡೂ ಪ್ರಕಾರಗಳನ್ನು ಕಾಣಬಹುದಾಗಿದೆ. ಪದ್ಯಗಳ ಆಯ್ಕೆಯಲ್ಲಿ ಹೊಸ ಪ್ರತಿಭೆಗಳಿಗೂ ಅವಕಾಶ ಕಲ್ಪಿಸಿದೆ. ಗದ್ಯ ಭಾಗದಲ್ಲಿ ನಾಟಕ, ಕಾದಂಬರಿ, ಸಣ್ಣಕಥೆ, ಪ್ರವಾಸ ಲೇಖನ, ಪತ್ರಿಕೆ ಮುಂತಾದ ಪ್ರಕಾರಗಳನ್ನು ಕಾಣಬಹುದಾಗಿದೆ. ಅಭ್ಯಾಸ ಹಂತದಲ್ಲಿ ಪಠ್ಯ ವಿಷಯ, ಸಾಮರ್ಥ್ಯ, ಭಾಷಾಭ್ಯಾಸ ಮತ್ತು ಭಾಷಾ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ಗುರುತಿಸಿದ್ದು ಪ್ರತಿಯೊಂದಕ್ಕೂ ವಿಶೇಷ ಒತ್ತನ್ನು ನೀಡಲಾಗಿದೆ. ಶಿಕ್ಷಕರು ಪಠ್ಯ ವಿಷಯದಲ್ಲಿನ ಈ ಎಲ್ಲ ಅಂಶಗಳನ್ನು ಮನನ ಮಾಡಿಕೊಳ್ಳುವ ಜೊತೆಗೆ ಮಕ್ಕಳು ಕಲಿಕೆಯನ್ನು ಕಟ್ಟಿಕೊಳ್ಳಲು ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸುವರೆಂಬ ಆಶಯವಿದೆ.

ಈ ಪಠ್ಯಪುಸ್ತಕದ ರಚನೆ ಹಾಗೂ ಪರಿಷ್ಕರಣೆಯ ಕಾರ್ಯದಲ್ಲಿ ನೆರವಾದ ಎಲ್ಲ ಸದಸ್ಯರ, ಪರಿಶೀಲಕರ, ಕಲಾವಿದರ ಸಹಕಾರವನ್ನು ನೆನಪಿಸಿಕೊಳ್ಳುತ್ತೇನೆ. ಅಂತೆಯೇ ರಾಜ್ಯ ಪಠ್ಯಪುಸ್ತಕ ಸಂಘದ ನಿರ್ದೇಶಕ, ಸಹ ನಿರ್ದೇಶಕ, ಉಪ ನಿರ್ದೇಶಕ ಹಾಗೂ ಹಿರಿಯ ಸಹಾಯಕ ನಿರ್ದೇಶಕರ ಮಾರ್ಗದರ್ಶನ ಹಾಗೂ ಸಹಕಾರವನ್ನು ಸ್ಮರಿಸುತ್ತ ಸಮಿತಿಯ ಪರವಾಗಿ ಅಭಿನಂದಿಸುತ್ತೇನೆ. ಪಠ್ಯಪುಸ್ತಕ ಸುಂದರವಾಗಿ ಹೊರಬರಲು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನೂ ಕೃತಜ್ಞತಾ ಪೂರ್ವಕವಾಗಿ ಅಭಿನಂದಿಸುತ್ತೇನೆ.

**ಶಿವಲಿಂಗಯ್ಯ**
ಅಧ್ಯಕ್ಷರು, ತಿಳಿ ಕನ್ನಡ – ೭
ಪಠ್ಯಪುಸ್ತಕ ರಚನಾ ಸಮಿತಿ

# ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ವಿವರ

**ಸರ್ವಾಧ್ಯಕ್ಷರು**

**ಪ್ರೊ. ಬರಗೂರು ರಾಮಚಂದ್ರಪ್ಪ**
ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು–೮೫

**ಅಧ್ಯಕ್ಷರು**

**ಡಾ. ಕೆಂಪೇಗೌಡ**
ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು–೬

**ಸದಸ್ಯರು**

**ಡಾ. ಗಣೇಶ್ ಜಿ. ಎಂ.**
ಸಹಾಯಕ ಪ್ರಾಧ್ಯಾಪಕರು, ಎಂ.ಎಲ್.ಎಂ.ಎನ್.
ಶಿಕ್ಷಣ ಮಹಾವಿದ್ಯಾಲಯ, ಜ್ಯೋತಿನಗರ, ಚಿಕ್ಕಮಗಳೂರು.

**ಡಾ. ಕೆ. ಷರೀಫಾ**
ಲೇಖಕಿ, ನಂ.೫/ಎ ೧ನೇ ಮಹಡಿ, ೧ನೇ ಬ್ಲಾಕ್,
೨ನೇ ಕ್ರಾಸ್, ಆರ್.ಟಿ. ನಗರ, ಬೆಂಗಳೂರು.

**ಶ್ರೀ ನಾಗರಾಜಾಚಾರಿ**
ಕನ್ನಡ ಶಿಕ್ಷಕರು, ಸರ್ಕಾರಿ ಉರ್ದು ಪ್ರೌಢಶಾಲೆ,
ಡಾ.ಟಿ.ಸಿ.ಎಂ. ರಾಯನ್ ರಸ್ತೆ, ಬೆಂಗಳೂರು.

**ಡಾ. ಬಂಗಾರಿಮಠ ಎಸ್. ವಿ.**
ಮುಖ್ಯಶಿಕ್ಷಕರು, ಸರ್ಕಾರಿ ಪ್ರೌಢಶಾಲೆ,
ಪುಡಕಲಕಟ್ಟಿ, ಧಾರವಾಡ ಜಿಲ್ಲೆ.

**ಶ್ರೀ ಪ್ರಕಾಶ್ ಎಸ್.**
ಸಿ.ಆರ್.ಪಿ. ಕ್ಷೇತ್ರ ಸಂಪನ್ಮೂಲ ಕೇಂದ್ರ, ಮದ್ದೂರು.
ಮಂಡ್ಯ ಜಿಲ್ಲೆ.

**ಶ್ರೀ ವೆಂಕಟೇಶ್ ಡಿ. ಎನ್.**
ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ,
ಉರಮಾರ ಕಸಲಗೆರೆ, ಮಂಡ್ಯ ದಕ್ಷಿಣ ವಲಯ.

## ಉನ್ನತ ಪರಿಶೀಲನಾ ಸಮಿತಿ

**ಡಾ. ಎಚ್.ಎಸ್. ರಾಘವೇಂದ್ರರಾವ್**
ನಿವೃತ್ತ ಪ್ರಾಧ್ಯಾಪಕರು, #೭, ೧೫ನೇ ಕ್ರಾಸ್, ೫ನೇ ಫೇಸ್,
ಜೆ.ಪಿ.ನಗರ, ಬೆಂಗಳೂರು–೭೮

**ಡಾ. ಜಿ.ಆರ್. ತಿಪ್ಪೇಸ್ವಾಮಿ**
ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ, ಮೈಸೂರು–೬

**ಡಾ. ಸೈಯದ್ ಜಮೀರ್ ಉಲ್ಲಾಷರೀಫ್**
ನಿವೃತ್ತ ಪ್ರಾಂಶುಪಾಲರು, ಭಟ್ಕಳ,
ಉತ್ತರ ಕನ್ನಡ ಜಿಲ್ಲೆ.

**ಡಾ. ಯಲ್ಲಪ್ಪ ಹಿಮ್ಮಡಿ**
ಎಸ್.ಪಿ.ಎಂ. ಕಲಾ ಮತ್ತು ವಾಣಿಜ್ಯ ಕಾಲೇಜು,
ರಾಯಬಾಗ, ಬೆಳಗಾವಿ ಜಿಲ್ಲೆ.

**ಡಾ. ಕಲಾವತಿ**
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಬಳ್ಳಾರಿ.

**ಡಾ. ಪ್ರಶಾಂತ್ ನಾಯಕ್**
ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ, ಶಿವಮೊಗ್ಗ.

**ಡಾ. ಗೀತಾ ವಸಂತ**
ಸಹಪ್ರಾಧ್ಯಾಪಕರು ಕನ್ನಡವಿಭಾಗ, ತುಮಕೂರು ವಿಶ್ವವಿದ್ಯಾಲಯ,
ತುಮಕೂರು.

**ಡಾ. ಸತ್ಯನಾರಾಯಣ ಎಚ್.ಎಸ್.**
ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು,
ಬಸವನಗುಡಿ, ಬೆಂಗಳೂರು.

### ಸಲಹೆ ಮತ್ತು ಮಾರ್ಗದರ್ಶನ

**ಶ್ರೀ ಮಾದೇಗೌಡ ಎಂ.ಪಿ.** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು–೮೫
**ಶ್ರೀ ಕೆ.ಜಿ. ರಂಗಯ್ಯ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು–೮೫

### ಕಾರ್ಯಕ್ರಮ ಸಂಯೋಜಕರು

**ಶ್ರೀಮತಿ ಎಂ.ಡಿ ಉಷಾ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು–೮೫

# ಪರಿಷ್ಕರಣೆ ಕುರಿತು

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ಧರಾಮಯ್ಯನವರು ತಮ್ಮ ೨೦೧೪–೧೫ ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕ ಮೌಲ್ಯಗಳು, ವ್ಯಕ್ತಿತ್ವ ವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತು ರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ ೨೭ ಸಮಿತಿಗಳನ್ನು ರಚಿಸಿ ದಿನಾಂಕ: ೨೪. ೧೧. ೨೦೧೪ ರಂದು ಆದೇಶ ಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು ೨೪.೧೧.೨೦೧೪ ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ ೧೯.೦೯.೨೦೧೫ ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು ೨೦೧೬–೧೭ ರ ಬದಲು ೨೦೧೭–೧೮ ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳ ಮಾಹಿತಿ ದೋಷ, ಆಶಯ ದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆ ಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ಕಳಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯ ಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್.ಸಿ.ಇ.ಆರ್.ಟಿ) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನುಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ. ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯಪಡೆದು ಅಳವಡಿಸಲಾಗಿದೆ.

ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ ೨೭ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.



**( ಮಾದೇಗೌಡ ಎಂ.ಪಿ.)**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
ಬೆಂಗಳೂರು–೮೫

**(ಪ್ರೊ. ಬರಗೂರು ರಾಮಚಂದ್ರಪ್ಪ)**
ಸರ್ವಾಧ್ಯಕ್ಷರು
ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ
ಕರ್ನಾಟಕ ಪಠ್ಯಪುಸ್ತಕ ಸಂಘ(ರಿ)
ಬೆಂಗಳೂರು–೮೫




# ಪರಿವಿಡಿ

## ಭಾಗ – ೧

## ಪೂರ್ವಸಿದ್ಧತಾ ಪಾಠಗಳು

೧. ಚಿತ್ರ ನೋಡಿ ಉತ್ತರಿಸಿರಿ.





ಅ) ಚಿತ್ರ ನೋಡಿ ೧೦ ಪದಗಳನ್ನು ಬರೆಯಿರಿ.

| | | | | |
|---|---|---|---|---|
| | | | | |

ಆ) ಚಿತ್ರಕ್ಕೆ ಸಂಬಂಧಿಸಿದಂತೆ ೫ ವಾಕ್ಯಗಳನ್ನು ಬರೆಯಿರಿ.

## ೨. ಚಿತ್ರ ಸರಣಿ ನೋಡಿ ಕಥೆ ಹೇಳಿರಿ.









* * *

೩. ಕಥೆ ಓದಿ ಪ್ರಶ್ನೆಗಳಿಗೆ ಉತ್ತರಿಸಿರಿ.

## ಇರುವೆ ಮತ್ತು ಮಿಡತೆ

ವಸಂತ ಋತು ಎಲ್ಲೆಡೆ. ಮರಗಿಡಗಳಲ್ಲಿ ಹೊಸ ಚಿಗುರು ಹೊಮ್ಮಿದೆ. ಬಣ್ಣ ಬಣ್ಣದ ಹೂಗಳು ಅರಳಿವೆ. ವನಗಳಲ್ಲಿನ ಸೊಬಗು ಕಣ್ಮನಗಳನ್ನು ಸೆಳೆದಿದೆ. ಮಿಡತೆಯೊಂದು ಅತ್ತಿತ್ತ ಸುತ್ತಾಡುತ್ತ ಕಾಲಕಳೆಯುತ್ತಿದೆ.

ಒಂದು ದಿನ ಇರುವೆಯೊಂದು ಬಾಯಲ್ಲಿ ಕಾಳು ಕಚ್ಚಿಕೊಂಡು ಹೋಗುತ್ತಿತ್ತು. ಅದನ್ನು ಕಂಡ ಮಿಡತೆ ವನವ ಸುತ್ತಿ ಬರಲು ಜೊತೆಗೆ ಕರೆಯಿತು. ನಾನು ಆಹಾರ ಸಂಗ್ರಹಿಸಬೇಕಿದೆ. ಈಗ ನಿನ್ನೊಂದಿಗೆ ಬರಲು ನನಗೆ ಸಮಯವಿಲ್ಲವೆಂದು ಇರುವೆ ಹೇಳಿತು. ಇರುವೆಯ ಮಾತಿಗೆ ನಕ್ಕು ಮಿಡತೆ ಹಾರಿಹೋಯಿತು.

ಮಳೆಗಾಲದ ಒಂದು ದಿನ ಮಿಡತೆಗೆ ಆಹಾರ ಸಿಗದೇ ಹೋಯಿತು. ಹಸಿವನ್ನು ತಾಳಲಾರದೆ ಇರುವೆಯ ಬಳಿ ಕೇಳಿತು, “ಗೆಳೆಯಾ ನನಗೂ ಸ್ವಲ್ಪ ಆಹಾರ ಕೊಡುವೆಯಾ” ಎಂದು. “ವಸಂತ ಋತುವಿನಲ್ಲಿ ನಾನು ಕಷ್ಟಪಟ್ಟು ಆಹಾರ ಸಂಗ್ರಹ ಮಾಡಿದ್ದೇನೆ. ನೀನು ಆಗ ಸುತ್ತಾಡುತ್ತಾ ಕಾಲಹರಣ ಮಾಡಿದೆ. ಏನು ಮಾಡಲಿ ನಿನಗೆ ಆಹಾರ ಕೊಟ್ಟರೆ ನನ್ನ ಪರಿವಾರಕ್ಕೆ ಕೊರತೆಯಾಗುತ್ತದೆಯಲ್ಲಾ” ಎಂದಿತು ಇರುವೆ. ಇರುವೆಯ ಮಾತಿನಿಂದ ಮಿಡತೆಗೆ ತನ್ನ ತಪ್ಪಿನ ಅರಿವಾಯಿತು. “ಗೆಳೆಯಾ ನಿನ್ನಿಂದ ನಾನು ಪಾಠ ಕಲಿತಿರುವೆ” ಎಂದು ವಿನಯದಿಂದ ಹೇಳಿತು. ಮಿಡತೆಯಲ್ಲಾದ ಪರಿವರ್ತನೆಗೆ ಇರುವೆ ಮೆಚ್ಚುಗೆ ವ್ಯಕ್ತಪಡಿಸಿತು. ತನ್ನ ಆಹಾರವನ್ನು ಮಿಡತೆಯೊಂದಿಗೆ ಹಂಚಿ ತಿಂದಿತು.



ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಹೇಳಿ, ಬರೆಯಿರಿ.

೧. ವಸಂತ ಋತು ಕಣ್ಮನಗಳಿಗೆ ಸೊಬಗನ್ನು ತರುತ್ತಿತ್ತು ಏಕೆ?

೨. ವಸಂತ ಕಾಲದಲ್ಲಿ ಮಿಡತೆ ಯಾವ ರೀತಿ ಕಾಲ ಕಳೆಯುತ್ತಿತ್ತು?

೩. ವಸಂತ ಕಾಲದಲ್ಲಿ ಇರುವೆ ಯಾವ ಕೆಲಸದಲ್ಲಿ ನಿರತವಾಗಿತ್ತು?

೪. ಮಳೆಗಾಲದಲ್ಲಿ ಮಿಡತೆಗೆ ಯಾವ ತೊಂದರೆ ಉಂಟಾಯಿತು?

೫. ಇರುವೆ ಮಿಡತೆಗೆ ಏನೆಂದು ಬುದ್ಧಿ ಹೇಳಿತು?

೬. ಮಿಡತೆ ಮತ್ತು ಇರುವೆ ಇವುಗಳಲ್ಲಿ ನೀವು ಯಾವುದನ್ನು ಮೆಚ್ಚುವಿರಿ? ಏಕೆ?

* * * *

ಭಾಗ – ೨

ಪಾಠ – ೧

# ನಿತ್ಯೋತ್ಸವ




– ಕೆ. ಎಸ್. ನಿಸಾರ್ ಅಹಮದ್

**ಪಾಠ ಪ್ರವೇಶ :**

ಕನ್ನಡ ನಾಡು ನುಡಿಯನ್ನು ಕುರಿತು ಅದೆಷ್ಟು ಭಾವನೆಗಳು ಮನಸ್ಸಿನಲ್ಲಿ ಮೂಡಿಬರುತ್ತವೆ. ಇಲ್ಲಿನ ಪ್ರಾಕೃತಿಕ ಸೌಂದರ್ಯ, ನದಿ, ಬೆಟ್ಟಗಳು, ಜಲಪಾತಗಳು, ಅರಣ್ಯಗಳು ಮೈಮನವನ್ನು ಸೆಳೆಯುತ್ತವೆ. ಹಾಗೆಯೇ ಈ ನಾಡಿನ ಇತಿಹಾಸ ವೀರರ ಕೆಚ್ಚು, ಜನರ ನಡೆನುಡಿಗಳು ಲೋಕಕ್ಕೆ ಆದರ್ಶವಾಗಿವೆ. ಹೀಗಾಗಿಯೇ ಅನೇಕ ಕವಿಗಳು ಈ ನಾಡನ್ನು ಅನೇಕ ವಿಧದಲ್ಲಿ ಹಾಡಿ ಹೊಗಳಿದ್ದಾರೆ. ಪ್ರಸ್ತುತ ಕವಿತೆಯಲ್ಲಿ ಕವಿ ಜಗತ್ಪ್ರಸಿದ್ಧ ಜೋಗದ ಜಲಪಾತ, ಸಹ್ಯಾದ್ರಿಯ ಪರ್ವತಶ್ರೇಣಿ ಮತ್ತು ಅಲ್ಲಿಯ ನದಿಗಳ ನೈಸರ್ಗಿಕ ಸೊಬಗು ನಿತ್ಯೋತ್ಸವವನ್ನು ಉಂಟುಮಾಡುತ್ತಿವೆ. ಈ ನಿತ್ಯೋತ್ಸವ ಇತಿಹಾಸದ ಪುಟಗಳಲ್ಲಿ, ದೇವಾಲಯಗಳ ಭಿತ್ತಿಗಳಲ್ಲಿ, ಓಲೆಗರಿಗಳಲ್ಲಿ ಅಷ್ಟೇ ಅಲ್ಲ ಜನರ ನಡೆನುಡಿಗಳಲ್ಲೂ ತುಂಬಿದೆ ಎಂದು ಬಣ್ಣಿಸಿದ್ದಾರೆ.



ಜೋಗದ ಸಿರಿ ಬೆಳಕಿನಲ್ಲಿ
ತುಂಗೆಯ ತೆನೆ ಬಳುಕಿನಲ್ಲಿ
ಸಹ್ಯಾದ್ರಿಯ ಲೋಹದದಿರ
ಉತ್ತುಂಗದ ನಿಲುಕಿನಲ್ಲಿ
ನಿತ್ಯ ಹರಿದ್ವರ್ಣ ವನದ ತೇಗ ಗಂಧ ತರುಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥೧॥

ಇತಿಹಾಸದ ಹಿಮದಲ್ಲಿನ
ಸಿಂಹಾಸನ ಮಾಲೆಯಲ್ಲಿ
ಗತ ಸಾಹಸ ಸಾರುತಿರುವ
ಶಾಸನಗಳ ಸಾಲಿನಲ್ಲಿ
ಓಲೆಗರಿಯ ಸಿರಿಗಳಲ್ಲಿ ದೇಗುಲಗಳ ಭಿತ್ತಿಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥೨॥



ಹಲವೆನ್ನದ ಹಿರಿಮೆಯೆ
ಕುಲವೆನ್ನದ ಗರಿಮೆಯೆ
ಸದ್ವಿಕಾಸ ಶೀಲನುಡಿಯ
ಲೋಕಾಮೃತ ಸೀಮೆಯೆ
ಈ ವತ್ಸರ ನಿರ್ಮತ್ಸರ ಮನದುದಾರ ಮಹಿಮೆಯೆ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥೩॥

****

## ಕೃತಿಕಾರರ ಪರಿಚಯ :



**ಕೆ. ಎಸ್. ನಿಸಾರ್ ಅಹಮದ್** ಕನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬರು. ಇವರು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ ಫೆಬ್ರವರಿ ೦೫, ೧೯೩೬ ರಲ್ಲಿ ಜನಿಸಿದರು. ಇವರು ವಿವಿಧ ಸರಕಾರಿ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ನಿವೃತ್ತರಾಗಿದ್ದಾರೆ.

ಪ್ರೊ. ಕೆ. ಎಸ್. ನಿಸಾರ್ ಅಹಮದ್ ಅವರು 'ಮನಸು ಗಾಂಧಿ ಬಜಾರು', ನೆನೆದವರ ಮನದಲ್ಲಿ', 'ಸಂಜೆ ಐದರ ಮಳೆ', 'ನಾನೆಂಬ ಪರಕೀಯ', 'ನಿತ್ಯೋತ್ಸವ', 'ನವೋಲ್ಲಾಸ', 'ಅಚ್ಚು ಮೆಚ್ಚು', 'ಇದು ಬರಿ ಬೆಡಗಲ್ಲೋ ಅಣ್ಣ' ಮುಂತಾದ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ.

ಇವರಿಗೆ ಮಾಸ್ತಿ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ನಾಡೋಜ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಇತ್ಯಾದಿ ಪುರಸ್ಕಾರಗಳು ಲಭಿಸಿವೆ. ಪ್ರಸ್ತುತ 'ನಿತ್ಯೋತ್ಸವ' ಕವಿತೆ ಅವರ ಪ್ರಸಿದ್ಧ ಕವಿತೆಯಾಗಿದೆ.



## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅದಿರು** – ಖನಿಜ
**ಉತ್ತುಂಗ** – ಎತ್ತರವಾದ; ಶ್ರೇಷ್ಠ.
**ಗತ** – ಹಿಂದೆ ಆದುದು
**ಅಮೃತ** – ಹಾಲು; ಪವಿತ್ರವಾದುದು.
**ಓಲೆ** – ತಾಳೆಗರಿ; ಕಾಗದ ಪತ್ರ.
**ಗರಿಮೆ** – ಹಿರಿಮೆ

**ತರು** – ಮರ

**ತೇಗ** – ಒಂದು ಜಾತಿಯ ಮರ; ಸಾಗುವಾನಿ.

**ನಿರ್ಮತ್ಸರ** – ದ್ವೇಷ ಇಲ್ಲದಿರುವುದು

**ವತ್ಸರ** – ಮಕ್ಕಳ; ವರ್ಷ.

**ಶಾಸನ** – ಆಜ್ಞೆ; ಕಲ್ಲಿನ ಮೇಲಿನ ಬರಹ.

**ಸದ್ವಿಕಾಸ** – ಉತ್ತಮ ಬೆಳವಣಿಗೆ

**ಸೀಮೆ** – ಸ್ಥಳ; ಪ್ರದೇಶ; ನಾಡು; ದೇಶ.

**ತೆನೆ** – ಬಸಿರು; ಧಾನ್ಯದ ಹೊಡೆ.

**ನಿತ್ಯೋತ್ಸವ** – ನಿತ್ಯ ನಡೆವ ಮಂಗಳ ಕಾರ್ಯ

**ಭಿತ್ತಿ** – ಗೋಡೆ

**ವನ** – ಕಾಡು; ಬನ; ಅರಣ್ಯ.

**ಶೀಲ** – ನಡತೆ; ಚಾರಿತ್ರ್ಯ.

**ಸಿರಿ** – ಸಂಪತ್ತು

**ಹಿರಿಮೆ** – ಹೆಚ್ಚುಗಾರಿಕೆ

## II. ಪ್ರಶ್ನೆಗಳು :

### ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಜೋಗದ ಸಿರಿ ಯಾವುದು?

೨. ತುಂಗಾ ನದಿ ಹೇಗೆ ಹರಿದು ಬರುತ್ತಿದೆ ಎಂದು ಕವಿ ಬಣ್ಣಿಸಿದ್ದಾರೆ?

೩. ಹರಿದ್ವರ್ಣ ಕಾಡುಗಳಲ್ಲಿ ಯಾವ ಜಾತಿಯ ಮರಗಳಿವೆ?

೪. ಶಾಸನಗಳು ಏನನ್ನು ಸಾರುತ್ತವೆ?

೫. ಕನ್ನಡ ಸೀಮೆಯ ಜನರ ಮನಸ್ಸು ಎಂತಹದ್ದು?

೬. ಕನ್ನಡ ಸೀಮೆಯ ಜನರ ನುಡಿ ಯಾವ ರೀತಿಯದು?

### ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕನ್ನಡ ನಾಡಿನ ಪ್ರಕೃತಿಯ ನಿತ್ಯೋತ್ಸವವನ್ನು ಕವಿ ಏನೆಂದು ವರ್ಣಿಸಿದ್ದಾರೆ?

೨. ನಾಡಿನ ಇತಿಹಾಸ ನಿತ್ಯೋತ್ಸವವನ್ನು ಎಲ್ಲೆಲ್ಲಿ ಕಾಣಬಹುದಾಗಿದೆ?

೩. ಕನ್ನಡ ಸೀಮೆಯ ಮಹಿಮೆ ಎಂತಹದ್ದು?

### ಇ) ಈ ಕೆಳಗಿನ ಪ್ರಶ್ನೆಗಳಿಗೆ ಏಳು–ಎಂಟು ವಾಕ್ಯಗಳಲ್ಲಿ ಉತ್ತರಿಸಿರಿ.

೧. ನಿತ್ಯೋತ್ಸವ ಎಂದರೇನು? ಕವಿ ಕನ್ನಡ ನಾಡಿನ ನಿತ್ಯೋತ್ಸವವನ್ನು ಯಾವ ರೀತಿ ಬಣ್ಣಿಸಿದ್ದಾರೆ?

## III. ಭಾಷಾಭ್ಯಾಸ :

**ಅ) ಇಲ್ಲಿರುವ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ನಿತ್ಯೋತ್ಸವ  ೨. ಉತ್ತುಂಗ  ೩. ಹಿರಿಮೆ  ೪. ಸದ್ವಿಕಾಸ  ೫. ಇತಿಹಾಸ

**ಆ) ಇಲ್ಲಿರುವ ಪದಗಳನ್ನು ಬಿಡಿಸಿ ಬರೆಯಿರಿ.**

೧. ನಿತ್ಯೋತ್ಸವ = ____________ + ____________

೨. ಮನದುದಾರ = ____________ + ____________

೩. ಲೋಹದದಿರ = ____________ + ____________

೪. ಲೋಕಾಮೃತ = ____________ + ____________

೫. ಸಿಂಹಾಸನ = ____________ + ____________

## IV. ಚಟುವಟಿಕೆಗಳು :

೧. ಕರ್ನಾಟಕವನ್ನು ಆಳಿದ ರಾಜಮನೆತನಗಳನ್ನು ಪಟ್ಟಿ ಮಾಡಿರಿ.

೨. ಕರ್ನಾಟಕದಲ್ಲಿ ದೊರೆತ ಪ್ರಮುಖ ಶಾಸನಗಳನ್ನು ಹೆಸರಿಸಿ ಹಾಗೂ ನಿಮ್ಮ ಸಮೀಪದಲ್ಲಿ ಯಾವುದಾದರೂ ಶಾಸನ ಕಂಡು ಬಂದಲ್ಲಿ ಅದರಲ್ಲಿರುವ ಬರೆಹವನ್ನು ಗಮನಿಸಿರಿ.

೩. ಕರ್ನಾಟಕದಲ್ಲಿರುವ ಪ್ರಮುಖ ನದಿ ಹಾಗೂ ಅರಣ್ಯ ಪ್ರದೇಶಗಳ ಬಗ್ಗೆ ಕೇಳಿ ತಿಳಿಯಿರಿ.

೪. 'ನಿತ್ಯೋತ್ಸವ' ಪದ್ಯವನ್ನು ರಾಗವಾಗಿ ಹಾಡಿರಿ, ಕಂಠಪಾಠ ಮಾಡಿರಿ ಹಾಗೂ ನೃತ್ಯ ಸಂಯೋಜನೆ ಮಾಡಿ ಶಾಲಾ ಕಾರ್ಯಕ್ರಮದಲ್ಲಿ ಪ್ರದರ್ಶಿಸಿ.

* * * * *

ಪಾಠ – ೨




# ಅನ್ನದಾನ

– ಚಂದ್ರಶೇಖರ ಕಂಬಾರ

**ಪಾಠ ಪ್ರವೇಶ :**

ಕಥೆಗಳೆಂದರೆ ಎಲ್ಲರಿಗೂ ಬಲು ಇಷ್ಟ. ಅದರಲ್ಲೂ ಮಕ್ಕಳಿಗಂತೂ ಬೇಕೇಬೇಕು. ನಮ್ಮ ಹಿರಿಯರು ಕಥೆಗಳನ್ನು ಕಟ್ಟಿ ಮಕ್ಕಳಲ್ಲಿ ಒಳ್ಳೆಯ ಸಂಸ್ಕಾರವನ್ನು ಬೆಳೆಸುತ್ತಿದ್ದರು. ಇಂದು ಹಸಿವಿನಿಂದ ಲಕ್ಷಾಂತರ ಜನ ಸಾಯುತ್ತಿದ್ದಾರೆ. ಇನ್ನೊಂದೆಡೆ ಅನ್ನವನ್ನು ಚೆಲ್ಲಿ ಶ್ರೀಮಂತಿಕೆಯಿಂದ ಮೆರೆಯುವ ಜನರೂ ಇದ್ದಾರೆ. ಅನ್ನದಾನದ ಮಹತ್ವವನ್ನು ಅರಿತು, ಹಸಿದವರಿಗೆ ತನ್ನಲ್ಲಿರುವ ಅನ್ನವನ್ನು ನೀಡಬೇಕು. ಅನ್ನದಾನಕ್ಕಿಂತ ಶ್ರೇಷ್ಠವಾದ ದಾನ ಮತ್ತೊಂದಿಲ್ಲ. ಈ ರೀತಿಯ ಮನೋಭಾವವನ್ನು ಎಲ್ಲರೂ ಬೆಳೆಸಿಕೊಳ್ಳಬೇಕು. ಪ್ರಸ್ತುತ ಪಾಠದಲ್ಲಿ ಅನ್ನದಾನದ ಮಹತ್ವವನ್ನು ಜಾನಪದ ಶೈಲಿಯ ಕಥೆಯ ಮೂಲಕ ಮನೋಜ್ಞವಾಗಿ ಕಟ್ಟಿಕೊಡಲಾಗಿದೆ.

ಒಂದೂರಲ್ಲಿ ತಾಯಿ ಮಗ ಇದ್ದರು. ತಾಯಿ ಅವರಿವರ ಮನೆಯ ಕಸಮುಸುರೆ ತೊಳೆದು ತಂದುದರಲ್ಲಿ ಮನೆಗೆ ಬಂದವರಿಗೆ ದಾನ ಮಾಡಿ, ಉಳಿದುದನ್ನು ಇಬ್ಬರೂ ತಿನ್ನುತ್ತಿದ್ದರು. ಒಂದೊಂದು ದಿನ ಬಹಳ ಮಂದಿ ಭಿಕ್ಷೆಗೆ ಬಂದರೆ ಮಗನಿಗಷ್ಟು ಇಟ್ಟು, ತನ್ನ ಪಾಲಿನ ಅನ್ನವನ್ನೂ ದಾನ ಮಾಡುತ್ತಿದ್ದಳು. ಮಗ ಹೀಗೇ ಬೆಳೆದು ದೊಡ್ಡವನಾದ. ವಯಸ್ಸಿಗೆ ಬಂದ. ತಾಯಿ ಬರೇ ಅನ್ನದಾನವೊಂದನ್ನು ಬಿಟ್ಟಿದ್ದರೆ ಅವರು ದೊಡ್ಡ ಶ್ರೀಮಂತರಾಗಬೇಕಿತ್ತು. ಆಗಲಿಲ್ಲ. ತಾಯಿ ಹೀಗೇಕೆ ಮಾಡುತ್ತಿರಬಹುದೆಂದು ಮಗನಿಗೆ ಯೋಚನೆಯಾಯಿತು. ಒಂದು ದಿನ ಮಗ,

"ತಾಯೀ, ಇದೇಕೆ ಹೀಗೆ ಅನ್ನದಾನ ಮಾಡುತ್ತೀ? ಒಂದೊಂದು ದಿನ ನೀನೇ ಉಪವಾಸವಿದ್ದು ಬೇರೆಯವರಿಗೆ ಅನ್ನದಾನ ಮಾಡುತ್ತೀ, ಅನ್ನದಾನವೊಂದನ್ನು ಬಿಟ್ಟಿದ್ದರೆ ನಾವು ಎಷ್ಟೊಂದು ಶ್ರೀಮಂತರಾಗುತ್ತಿದ್ದೆವು. ಅದೇನು ಅನ್ನದಾನದ ಮಹತ್ವ? ಹೇಳು" ಎಂದ. ಅದಕ್ಕೆ ತಾಯಿ,

"ಮಗೂ, ದಾನಗಳಲ್ಲಿ ಅನ್ನದಾನವೇ ಹೆಚ್ಚಿನದು. ಬಡತನ ಶ್ರೀಮಂತಿಕೆ ಕೊನೆತನಕ ಇರುವುದಿಲ್ಲ. ಆದರೆ ಅನ್ನದಾನದ ಪುಣ್ಯ ಕೊನೆತನಕ ಇರುವಂಥಾದ್ದು" ಎಂದಳು.

"ಆ ಪುಣ್ಯ ಯಾವುದು?" ಪ್ರಶ್ನಿಸಿದ ಮಗ.

"ಅದನ್ನು ಹೇಳುವುದು ನಮ್ಮಂಥ ನರಮನುಷ್ಯರಿಂದ ಹೇಗಾದೀತು? ಅದು ಶಿವನಿಗೆ ಗೊತ್ತು. ಅವನನ್ನೇ ಹೋಗಿ ಕೇಳು" ಎಂದು ತಾಯಿ ಹೇಳಿದಳು.

ಸರಿ, ಅದರಂತೆ ಮಗ ತಾಯಿಯ ಅಪ್ಪಣೆ ಪಡೆದುಕೊಂಡು ಶಿವನ ಬಳಿಗೆ ಹೊರಟ.

ಹೋಗುತ್ತ ಹೋಗುತ್ತ ದೊಡ್ಡದೊಂದು ಅಡವಿ ಬಂತು. ಅಲ್ಲಿ ಗಿಡಮರ ದಟ್ಟವಾಗಿ ಬೆಳೆದಿದ್ದವು. ಇವನು ಬೆಟ್ಟ ಹತ್ತಿ ಇಳಿಯುವಷ್ಟರಲ್ಲಿ ಸಂಜೆಯಾಯಿತು. ಮುಂದೆ ಏನು ಮಾಡಬೇಕೆಂದು

ಹೊಳೆಯದಾಯಿತು. ಆಗ ಅಲ್ಲಿಗೊಬ್ಬ ಬೇಡ ಬಂದ. ಈ ಹುಡುಗನನ್ನು ನೋಡಿ ಅವನಿಗೆ ಕರುಣೆ ಬಂತು. ಹೀಗೆ ಬಿಟ್ಟರೆ ಹುಡುಗ ಹುಲಿ ಸಿಂಹಗಳ ಬಾಯಿಗೆ ಬೀಳುತ್ತಾನೆಂದುಕೊಂಡು,

"ಏ ಹುಡುಗಾ, ಸಂಜೆ ಸಮಯದಲ್ಲಿ ಹೀಗೆ ಕಾಡಿನಲ್ಲಿ ಅಡ್ಡಾಡಿದರೆ ಏನು ಗತಿಯಾದೀತು? ಇದು ಹುಲಿ–ಸಿಂಹಗಳಿರುವ ಸ್ಥಳ. ಇಂದು ರಾತ್ರಿ ನಮ್ಮ ಗುಡಿಸಲಲ್ಲಿದ್ದು ನಾಳೆ ಹೋದೀಯಂತೆ ಬಾ" ಅಂದ. ಹುಡುಗನಿಗೂ ಅಷ್ಟೇ ಬೇಕಾಗಿತ್ತು. ಬೇಡನೊಂದಿಗೆ ಹೋದ.

ಗುಡಿಸಲಿಗೆ ಹೋಗಿ ಬೇಡ ಹೆಂಡತಿಗೆ ಹೇಳಿದ. ಈತ ಕಾಡಿನಲ್ಲಿ "ಅಲೆದಾಡುತ್ತಿದ್ದ, ನಾನೇ ಕರೆದುತಂದೆ. ಇಂದಿದ್ದು ನಾಳೆ ಹೋಗುತ್ತಾನೆ. ಹಸಿದಿದ್ದಾನು, ಹಣ್ಣು ಹಾಲು ಕೊಡು." ಅವಳು "ಅದೆಲ್ಲಾ ನನ್ನಿಂದ ಆಗದು. ಬೇಕಿದ್ದರೆ ನಿನ್ನ ಪಾಲಿನ ಹಣ್ಣು ಹಾಲು ಕೊಡು. ಇಲ್ಲದಿದ್ದರೆ ಬಿಡು" ಎಂದಳು. ಬೇಡ ತನ್ನ ಪಾಲಿನ ಹಣ್ಣು, ಹಾಲು ಕೊಟ್ಟ. "ಹುಡುಗಾ, ದಣಿದಿದ್ದೀಯಪ್ಪ, ಮಲಗು" ಅಂದು ಕರುಣೆಯಿಂದ ಹುಡುಗನನ್ನು ಉಪಚರಿಸಿದ. ಹಾಸಿಗೆ ಹಾಸಿ ಮಲಗಿಸಿದ. ತನಗೆ ಮಲಗಲು ಸ್ಥಳ ಇರದಿದ್ದರಿಂದ ಬಾಗಿಲ ಹೊರಗೆ ಕಾಲುಚಾಚಿ ಒಳಗೆ ತಲೆಯಿಟ್ಟು ಬಾಗಿಲು ತೆರೆದೇ ಮಲಗಿದ. ಆದರೆ ರಾತ್ರಿ ಹುಲಿ ಬಂದು ಹೊರಗರ್ಧ ಒಳಗರ್ಧ ಮಲಗಿದ್ದ ಬೇಡನನ್ನು ಕೊಂದು ತಿಂದುಹಾಕಿತು. ರಕ್ತದ ರುಚಿ ಹತ್ತಿ ಒಳಗೆ ಹೋಗಿ ಅವನ ಹೆಂಡತಿಯನ್ನೂ ತಿಂದು ಹಾಕಿತು. ಹೊಟ್ಟೆ ತುಂಬಿದ ಹುಲಿ ಆ ಹುಡುಗನನ್ನು ನೋಡದೆ ಹಾಗೇ ಹೋಯಿತು. ಮುಂಜಾನೆ ಇವನೆದ್ದು ನೋಡಿದರೆ ಇಬ್ಬರ ಎಲುಬುಗಳನ್ನು ಬಿಟ್ಟು ಬೇರೇನೂ ಇರಲಿಲ್ಲ. ಪಾಪ ಬಹಳ ಅನ್ಯಾಯವಾಯಿತೆಂದು ಹಳಹಳಿಸಿ ಮತ್ತೆ ಪ್ರಯಾಣ ಮಾಡಿದ.

ದಾರಿಯಲ್ಲಿ ಒಬ್ಬ ರಾಜ ತಲೆಯ ಮೇಲೆ ಕೈಹೊತ್ತು ಕೂತಿದ್ದ. ಇವನನ್ನು ನೋಡಿ–

"ಹುಡುಗಾ, ಎಲ್ಲಿ ಹೊರಟಿರುವೆ?" ಅಂದ.

"ಒಂದು ಪ್ರಶ್ನೆಯಿದೆ. ಅದನ್ನು ಕೇಳಲು ಶಿವನ ಬಳಿಗೆ ಹೋಗುತ್ತಿದ್ದೇನೆ" ಎಂದ.

"ಹಾಗಿದ್ದರೆ ನನ್ನದೂ ಒಂದು ಪ್ರಶ್ನೆ ಇದೆ. ಕೇಳಿಕೊಂಡು ಬರುತ್ತೀಯಾ?" ಎಂದ ರಾಜ

"ಏನದು?"

"ಕೋಟಿ ಹಣ ಖರ್ಚು ಮಾಡಿ ಒಂದು ಕೆರೆ ಕಟ್ಟಿಸಿದೆ. ತಟ್ಟಂತ ಒಂದು ಹನಿ ನೀರಿಲ್ಲ. ಯಾಕೆಂದು ಕೇಳಿಕೊಂಡು ಬರುತ್ತೀಯಾ?"

ಆಗಲೆಂದು ಹುಡುಗ ಮುಂದೆ ಹೊರಟ.

ಮುಂದೆ ಹೋಗುವಷ್ಟರಲ್ಲಿ ಒಬ್ಬ ಕುಂಟ ಕುಳಿತಿದ್ದ. ಅವನೂ, "ತಮ್ಮಾ, ನನ್ನ ಕುಂಟುತನಕ್ಕೆ ಏನು ಕಾರಣವೆಂದು ಕೇಳಿಕೊಂಡು ಬಾ" ಅಂದ. ಆಗಲೆಂದು ಹುಡುಗ ಮುಂದೆ ಹೊರಟ.

ಮುಂದೆ ದಾರಿಯಲ್ಲಿ ಒಂದು ಹುತ್ತ ಸಿಕ್ಕಿತು. ಅದರಲ್ಲಿ ಅರ್ಧ ಹೊರಗೂ, ಅರ್ಧ ಒಳಗೂ ಸಿಕ್ಕಿಕೊಂಡು ಹಿಂದಕ್ಕೂ ಮುಂದಕ್ಕೂ ಚಲಿಸಲಾರದ ಒಂದು ಸರ್ಪವಿತ್ತು. ಅದಕ್ಕೂ ತನ್ನ ಪ್ರಯಾಣದ ಉದ್ದೇಶ ಹೇಳಿದ. ಅದು "ನನ್ನ ಇಂಥ ಸ್ಥಿತಿಗೆ ಏನು ಕಾರಣ ಕೇಳಿಕೊಂಡು ಬಾ" ಎಂದಿತು. ಹುಡುಗ ಆಗಲೆಂದು ಹೇಳಿ ಮುಂದಕ್ಕೆ ಹೊರಟ.

ಹೋದ, ಹೋದ, ಸೀದಾ ಕೈಲಾಸ ಪರ್ವತಕ್ಕೆ ಹೋದ. ಅಲ್ಲಿ ಶಿವ ಪಾರ್ವತಿ ಕುಳಿತಿದ್ದರು. ಹೋಗಿ ನಮಸ್ಕರಿಸಿದ. "ಶಂಭೋ, ಅನ್ನದಾನದ ಪುಣ್ಯ ಏನು? ಹೇಳಬೇಕು" ಎಂದ. ಅದಕ್ಕೆ ಶಿವನು,

"ನೋಡು ಮಗು, ನೇಪಾಳ ದೇಶದ ರಾಜನ ಹೆಂಡತಿ ಗರ್ಭವತಿಯಾಗಿದ್ದಾಳೆ. ನೀನು ಹೋಗಿ ನಾನು ಕೊಟ್ಟ ಪ್ರಸಾದ ಕೊಡು. ಹಡೆಯುತ್ತಾಳೆ. ಹುಟ್ಟಿದ ಆ ಕೂಸನ್ನು ಕೇಳಿದರೆ ಅದು ನಿನಗೆ ಅನ್ನದಾನದ ಪುಣ್ಯ ಏನೆನ್ನುವುದನ್ನು ಹೇಳುತ್ತದೆ" ಎಂದ.

ಹಾಗೆಯೇ ರಾಜನ ಕೆರೆಯಲ್ಲಿ ನೀರು ಬೀಳದಿರುವ ಕಾರಣ ಕೇಳಿದ. ಅದಕ್ಕೆ ಶಿವನು ಹೇಳಿದ–

"ರಾಜನಿಗೆ ಬೆಳೆದ ಒಬ್ಬ ಮಗಳಿದ್ದಾಳೆ. ಅವಳನ್ನು ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಿದರೆ ಕೆರೆಯಲ್ಲಿ ನೀರು ತುಂಬುತ್ತದೆ."

"ಹಾಗೆ ಕುಂಟನ ಕಾಲು ಯಾಕೆ ಹೋಗಿವೆ?"

"ತನಗೆ ತಿಳಿದ ವಿದ್ಯೆಯನ್ನು ಆತ ಯಾರಿಗಾದರೂ ಯೋಗ್ಯನಿಗೆ ದಾನ ಮಾಡಿದರೆ ಹೋದ ಕಾಲು ಬರುತ್ತವೆ."





“ಸರ್ಪವೊಂದು ಹುತ್ತದ ಒಳಗೂ ಹೋಗದೆ ಹೊರಗೂ ಬರಲಾರದೆ ಸಿಕ್ಕಿಕೊಂಡಿದೆಯಲ್ಲ. ಏನು ಕಾರಣ?”

“ತನ್ನ ನೆತ್ತಿಯ ರತ್ನವನ್ನು ಒಬ್ಬ ಯೋಗ್ಯನಿಗೆ ದಾನ ಮಾಡಿದಲ್ಲಿ ಅದು ಸರಿದಾಡಬಹುದು.”

–ಹೀಗೆ ಎಲ್ಲಾ ಪ್ರಶ್ನೆಗಳಿಗೂ ಉತ್ತರ ಕೇಳಿಕೊಂಡು ಶಿವಪಾರ್ವತಿಯರಿಗೆ ನಮಸ್ಕರಿಸಿ, ಪ್ರಸಾದ ತೆಗೆದುಕೊಂಡು ತಿರುಗಿ ಬಂದ.

ಬರುವಾಗ ದಾರಿಯಲ್ಲಿ ಮೊದಲು ಸರ್ಪ ಸಿಕ್ಕಿತು. “ಹುಡುಗಾ, ಕೇಳಿದೆಯಾ ನನ್ನ ಪ್ರಶ್ನೆ?” ಎಂದಿತು.

“ಹೌದು ಕೇಳಿದೆ. ನಿನ್ನ ನೆತ್ತಿಯಲ್ಲೊಂದು ರತ್ನ ಇದೆಯಂತೆ. ಅದನ್ನು ಯೋಗ್ಯನಿಗೆ ದಾನ ಮಾಡಿದರೆ ನೀನು ಸರಿದಾಡಬಹುದಂತೆ” ಎಂದ.





“ಹಾಗಿದ್ದರೆ ಇಕೋ, ನಿನಗೇ ಅದನ್ನು ದಾನ ಮಾಡುತ್ತೇನೆ. ತಕೋ” ಎಂದು ತನ್ನ ನೆತ್ತಿಯ ರತ್ನವನ್ನು ಹುಡುಗನಿಗೆ ಕೊಟ್ಟಿತು. ಆ ಕೂಡಲೇ ಅದಕ್ಕೆ ಸರಿದಾಡುವ ಶಕ್ತಿ ಬಂದು, ಆನಂದದಿಂದ ಹೆಡೆ ತೆಗೆದು ಆಡಲಾರಂಭಿಸಿತು. ಹುಡುಗ ಮತ್ತೆ ತನ್ನ ದಾರಿ ಹಿಡಿದ.

ಮುಂದೆ ಬರುವಷ್ಟರಲ್ಲಿ ಕುಂಟ ಸಿಕ್ಕಿದ. “ಹುಡುಗಾ, ನನ್ನ ಪ್ರಶ್ನೆ ಕೇಳಿದೆಯಾ?” ಎಂದು ಕೇಳಿದ.

"ಕೇಳಿದೆ. ನಿನ್ನ ಹತ್ತಿರ ಇರುವ ವಿದ್ಯೆಯನ್ನೆಲ್ಲ ಒಬ್ಬ ಯೋಗ್ಯನಿಗೆ ದಾನ ಮಾಡಿದರೆ ನಿನ್ನ ಕಾಲು ಬರುತ್ತವಂತೆ." ಎಂದ ಹುಡುಗ.

"ಹಾಗಿದ್ದರೆ ನಿನಗಿಂತ ಯೋಗ್ಯ ಯಾರಿದ್ದಾರು? ಇಕೋ, ನನಗೆ ಗೊತ್ತಿರುವ ವಿದ್ಯೆಯನ್ನು ನಿನಗೆ ದಾನ ಮಾಡುತ್ತೇನೆ."

–ಎಂದು ಹೇಳಿ ಕುಂಟ ತನ್ನ ಅರವತ್ತನಾಲ್ಕು ವಿದ್ಯೆಗಳನ್ನೆಲ್ಲ ಇವನಿಗೆ ಧಾರೆಯೆರೆದ. ಅವನಿಗೆ ಕಾಲು ಬಂದವು. ಆನಂದದಿಂದ ಕುಣಿದಾಡಿದ. ಹುಡುಗ ಮತ್ತೆ ತನ್ನ ದಾರಿಯನ್ನು ಹಿಡಿದು ಹೊರಟ.

ಇನ್ನಷ್ಟು ಮುಂದೆ ಬಂದ. ತಲೆಯ ಮೇಲೆ ಕೈಹೊತ್ತಿದ್ದ ರಾಜ ಸಿಕ್ಕಿದ. ಇವನನ್ನು ಕಂಡೊಡನೆ "ಹುಡುಗಾ, ನನ್ನ ಮಾತನ್ನು ಕೇಳಿದೆಯಾ?" ಎಂದ.

"ಹೌದು, ಕೇಳಿದೆ. ನಿನ್ನ ಬೆಳೆದ ಮಗಳನ್ನು ಒಬ್ಬ ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಿದರೆ ಕೆರೆಯಲ್ಲಿ ನೀರು ತುಂಬುತ್ತದಂತೆ."



"ನಿನಗಿಂತ ಯೋಗ್ಯ ವರ ಇನ್ನಾರಿದ್ದಾರು! ಬಾ" ಎಂದು ಹೇಳಿ ರಾಜ ತನ್ನ ಮಗಳನ್ನು ಆ ಹುಡುಗನಿಗೆ ಮದುವೆ ಮಾಡಿಕೊಟ್ಟ. ಬೆಳಗಾಗುವಷ್ಟರಲ್ಲಿ ಕೆರೆ ನೀರಿನಿಂದ ತುಂಬಿ ತುಳುಕಲಾರಂಭಿಸಿತು.

ಹುಡುಗ ಹೆಂಡತಿಯನ್ನು ಕರೆದುಕೊಂಡು ನೇಪಾಳ ದೇಶಕ್ಕೆ ಬಂದ. ಆ ದೇಶದ ರಾಜನ ಹೆಂಡತಿ ದಿನ ತುಂಬಿದ್ದರೂ ಹಡೆಯಲಾರದೆ ಸಂಕಟ ಪಡುತ್ತಿದ್ದಳು. ಹುಡುಗ ಹೋಗಿ ಶಿವನ ಪ್ರಸಾದ ಕೊಟ್ಟ. ಅವಳು ಆ ಕ್ಷಣವೇ ಬಂಗಾರದಂಥ ಮಗನನ್ನು ಹಡೆದಳು. " ಕೂಸಿಗೊಂದು ಪ್ರಶ್ನೆ ಕೇಳಬೇಕಾಗಿದೆ. ದರ್ಬಾರಿಗೆ ತರಿಸಬೇಕು" ಎಂದು ಹುಡುಗ ಹೇಳಿದ. ಎಲ್ಲರಿಗೂ ಆಶ್ಚರ್ಯವಾಯಿತು. ಆದರೂ

ಕೂಸನ್ನು ದರ್ಬಾರಿಗೆ ತಂದು ಬಂಗಾರದ ತಟ್ಟೆಯಲ್ಲಿಟ್ಟರು. ಹುಡುಗ ಹೇಳಿದ –

"ಮಗು, ಶಿವ ನನ್ನನ್ನು ನಿನ್ನ ಬಳಿ ಕಳಿಸಿದ್ದಾನೆ. ಅನ್ನದಾನದ ಪುಣ್ಯ ಯಾವುದು?"

ಈ ಮಾತನ್ನು ಕೇಳಿ ತಟ್ಟೆಯಲ್ಲಿದ್ದ ಮಗು ಪಕ ಪಕ ನಕ್ಕು ಮಾತಾಡಿತು.

"ಅಯ್ಯಾ, ಶಿವನನ್ನು ಕಾಣುವುದಕ್ಕೆ ಹೊರಟಿದ್ದಿ. ಅಡವಿಯಲ್ಲಿ ದಾರಿ ತಪ್ಪಿ ಅಲೆದಾಡುತ್ತಿದ್ದಿ. ಆಗ ಒಬ್ಬ ಬೇಡ ಬಂದು ನಿನ್ನನ್ನು ತನ್ನ ಗುಡಿಸಲಿಗೆ ಕರೆದೊಯ್ದು ಹಣ್ಣು ಹಾಲು ಕೊಟ್ಟದ್ದು ನೆನಪಿದೆಯೇ?

"ಹೌದು"

"ಹಾಗೆ ಮಾಡಿದ ಬೇಡ ನಾನೇ. ಅಂದೇ ನನ್ನನ್ನೂ ನನ್ನ ಹೆಂಡತಿಯನ್ನೂ ಹುಲಿ ತಿಂದಿತು; ಅನ್ನದಾನ ಮಾಡಿದ್ದಕ್ಕೆ ನಾನಿಂದು ರಾಜಕುಮಾರನಾಗಿ ಹುಟ್ಟಿದ್ದೇನೆ. ನನ್ನ ಹೆಂಡತಿ ಕೊಡಲು ಒಪ್ಪಲಿಲ್ಲ. ಅವಳು ಇದೇ ಊರಿನಲ್ಲಿ ಹಂದಿಯಾಗಿ ಹುಟ್ಟಿದ್ದಾಳೆ. ಬೇಕಾದರೆ ಹೋಗಿ ನೋಡು" ಎಂದು ಆ ಮಗು ಹೇಳಿತು.

ಆಗ ಈ ಹುಡುಗ ತಿರುಗಿ ತನ್ನ ತಾಯಿಯ ಬಳಿಗೆ ಬಂದು ತಾನೂ ಅನ್ನದಾನ ಮಾಡುತ್ತ ಸುಖದಿಂದ ಇದ್ದ.

* * * * *



### ಕೃತಿಕಾರರ ಪರಿಚಯ :



**ಚಂದ್ರಶೇಖರ ಕಂಬಾರ** ಅವರು ೧೯೩೭ ರಲ್ಲಿ ಬೆಳಗಾವಿ ಜಿಲ್ಲೆಯ ಘೋಡಗೇರಿ ಗ್ರಾಮದಲ್ಲಿ ಜನಿಸಿದರು. ಇವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದರು. ಕವಿ, ಜನಪದ ವಿದ್ವಾಂಸ, ನಾಟಕಕಾರ, ಕಾದಂಬರಿಕಾರರಾಗಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. 'ಹೇಳತೇನಕೇಳ', 'ಬೆಳ್ಳಿ ಮೀನು', 'ತಕರಾರಿನವರು', 'ಚಕೋರಿ', 'ಋಷ್ಯಶೃಂಗ', 'ಕಾಡುಕುದುರೆ', 'ಸಿರಿಸಂಪಿಗೆ', 'ಹುಲಿಯ ನೆರಳು', 'ಮಹಾಮಾಯಿ', 'ಆಲಿಬಾಬ ಮತ್ತು ನಲವತ್ತು ಕಳ್ಳರು', 'ಜೋಕುಮಾರಸ್ವಾಮಿ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಇವರಿಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ, ಕೇರಳದ ಕುಮಾರನ್ ಆಶಾನ್ ಪ್ರಶಸ್ತಿ ಮುಂತಾದ ಗೌರವ ಪ್ರಶಸ್ತಿಗಳು ಲಭಿಸಿವೆ.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅಡವಿ** – ಕಾಡು; ಅರಣ್ಯ.
**ದಣಿವು** – ಆಯಾಸ
**ದಾನ** – ಕೊಡುಗೆ
**ಬೇಡ** – ಬೇಟೆಗಾರ
**ಮಂದಿ** – ಜನ
**ಸರ್ಪ** – ಹಾವು; ಉರಗ.
**ಹಡೆ** – ಹೆರಿಗೆಯಾಗು; ಜನ್ಮನೀಡು.
**ಕೈಲಾಸ** – ಶಿವನ ವಾಸಸ್ಥಳ
**ದರ್ಬಾರು** – ಅಧಿಕಾರ ನಡೆಸುವಿಕೆ
**ಧಾರೆ** – ಒಂದೇ ಸಮನೆ ನೀರುಸುರಿಸುವಿಕೆ
**ಭಿಕ್ಷೆ** – ತಿರುಪೆ; ಬೇಡುವುದು.
**ವರ** – ಮದುವೆಯಾಗುವ ಗಂಡು
**ಸೀದಾ** – ನೇರವಾಗಿ
**ಹಳಹಳಿಸು** – ಉಮ್ಮಳಿಸು; ದುಃಖಿತನಾಗು.
**ಹುತ್ತ** – ಹಾವಿನ ವಾಸಸ್ಥಾನ; ಗೆದ್ದಲು ಕಟ್ಟಿದ ಮಣ್ಣಿನ ಗೂಡು.

### II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ತಾಯಿಯ ಅನ್ನದಾನವನ್ನು ಕಂಡು ಮಗನಿಗೆ ಯಾವ ಯೋಚನೆ ಬಂದಿತು?
೨. ತಾಯಿಯು ಅನ್ನದಾನದ ಬಗ್ಗೆ ಮಗನಿಗೆ ಏನೆಂದು ಹೇಳಿದಳು?
೩. ತಾಯಿ ಮಗನನ್ನು ಶಿವನ ಬಳಿ ಏಕೆ ಕಳುಹಿಸಿದಳು?
೪. ಬೇಡನಿಗೆ ಹುಡುಗನನ್ನು ನೋಡಿ ಏಕೆ ಕರುಣೆ ಬಂತು?
೫. ರಾಜನು ಶಿವನಲ್ಲಿ ಯಾವ ಪ್ರಶ್ನೆಗೆ ಉತ್ತರ ಕೇಳಿಕೊಂಡು ಬರಲು ಹುಡುಗನಿಗೆ ಹೇಳಿದನು?
೬. ಕುಂಟನು ಶಿವನ ಬಳಿ ಕೇಳಬಯಸಿದ ಪ್ರಶ್ನೆ ಯಾವುದು?
೭. ರಾಜನು ಕಟ್ಟಿಸಿದ ಕೆರೆಗೆ ನೀರು ಬಂದದ್ದು ಹೇಗೆ?
೮. ಕುಂಟನಿಗೆ ಕಾಲುಗಳು ಬಂದದ್ದು ಹೇಗೆ?
೯. ಹುಡುಗನು ನೇಪಾಳ ದೇಶಕ್ಕೆ ಏಕೆ ಹೋದನು?
೧೦. ಬೇಡನ ಹೆಂಡತಿ ಹಂದಿಯಾಗಿ ಹುಟ್ಟಿದ್ದು ಏಕೆ?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ತಾಯಿಯೊಬ್ಬಳು ಅನ್ನದಾನ ಮಾಡುತ್ತ ಮಗನೊಂದಿಗೆ ಹೇಗೆ ಜೀವಿಸುತ್ತಿದ್ದಳು?
೨. ಮಗನು ತಾಯಿಯ ಅನ್ನದಾನವನ್ನು ಕಂಡು ಏನೆಂದು ಕೇಳಿದನು?
೩. ಬೇಡನು ಹುಡುಗನಿಗೆ ಏನೆಂದು ಹೇಳಿ ತನ್ನ ಗುಡಿಸಲಿಗೆ ಕರೆದುಕೊಂಡು ಹೋದನು?

೪. ಬೇಡನು ಹುಡುಗನನ್ನು ಯಾವ ರೀತಿ ಉಪಚರಿಸಿದನು?
೫. ಸರ್ಪ ಯಾವ ಕಷ್ಟದಲ್ಲಿ ಸಿಲುಕಿತ್ತು? ಆ ಕಷ್ಟದಿಂದ ಅದು ಹೇಗೆ ಪಾರಾಯಿತು?
೬. ಶಿವನು ಹುಡುಗನಿಗೆ ಏನೆಂದು ಹೇಳಿ ಕಳುಹಿಸಿದನು?

**ಇ) ಈ ಕೆಳಗಿನ ಪ್ರಶ್ನೆಗಳಿಗೆ ಆರು-ಏಳು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬೇಡ ಮತ್ತು ಆತನ ಹೆಂಡತಿ ಹುಲಿಯ ಬಾಯಿಗೆ ಹೇಗೆ ತುತ್ತಾದರು?
೨. ಹುಡುಗನು ಶಿವನ ಬಳಿ ಕೇಳಿದ ಪ್ರಶ್ನೆಗಳಾವುವು? ಅದಕ್ಕೆ ಶಿವನು ನೀಡಿದ ಉತ್ತರಗಳೇನು?
೩. ಮಗು ಹುಡುಗನಿಗೆ ಅನ್ನದಾನದ ಮಹತ್ವವನ್ನು ಹೇಗೆ ತಿಳಿಸಿಕೊಟ್ಟಿತು?

**ಈ) ಇಲ್ಲಿರುವ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. ಬಡತನ ಶ್ರೀಮಂತಿಕೆ ಕೊನೆತನಕ ಇರುವುದಿಲ್ಲ.
೨. ಬೇಕಿದ್ದರೆ ನಿನ್ನ ಪಾಲಿನ ಹಣ್ಣು ಹಾಲು ಕೊಡು.
೩. ನಿನಗಿಂತ ಯೋಗ್ಯ ವರ ಇನ್ನಾರಿದ್ದಾರು! ಬಾ.
೪. ಅವಳು ಇದೇ ಊರಿನಲ್ಲಿ ಹಂದಿಯಾಗಿ ಹುಟ್ಟಿದ್ದಾಳೆ.

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ಅಲ್ಲಿಗೊಬ್ಬ = ________ + ________
೨. ಆಗಲೆಂದು = ________ + ________
೩. ಸರ್ಪವಿತ್ತು = ________ + ________
೪. ಕೆರೆಯಲ್ಲಿ = ________ + ________

**ಆ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ಶ್ರೀಮಂತ x ________ ೨. ಪುಣ್ಯ x ________
೩. ಕರುಣೆ x ________ ೪. ಅನ್ಯಾಯ x ________
೫. ಹೊರಗೆ x ________ ೬. ಯೋಗ್ಯ x ________
೭. ವಿದ್ಯೆ x ________ ೮. ಸುಖ x ________

ಇ) ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಅನ್ನದಾನ :________________________

೨. ಪುಣ್ಯ :________________________

೩. ಪ್ರಸಾದ :________________________

೪. ಕೈಲಾಸ :________________________

೫. ದಣಿವು :________________________

ಈ) ಸೂಚನೆಗಳಿಗನುಸಾರ ವಾಕ್ಯಗಳನ್ನು ಪುನಃ ರಚಿಸಿರಿ.

೧. ತನಗೆ ತಿಳಿದ ವಿದ್ಯೆಯನ್ನು ಯೋಗ್ಯನಿಗೆ ದಾನ ಮಾಡಿದರೆ ಹೋದಕಾಲು ಬರುತ್ತವೆ. (ಭೂತಕಾಲದಲ್ಲಿ ಬರೆಯಿರಿ)

________________________

೨. ಹುಡುಗನನ್ನು ನೋಡಿ ಬೇಡನಿಗೆ ಕರುಣೆ ಬಂತು. (ಬಹು ವಚನದಲ್ಲಿ ಬರೆಯಿರಿ)

________________________

೩. ಖರ್ಚುಮಾಡಿ ಕೋಟಿ ಒಂದು ಹಣ ಕೆರೆ ಕಟ್ಟಿಸಿದೆ. (ವಾಕ್ಯವನ್ನು ಸರಿಪಡಿಸಿ ಬರೆಯಿರಿ)

________________________

೪. ಹುಡುಗಾ ಎಲ್ಲಿ ಹೊರಟಿರುವೆ (ಸೂಕ್ತ ಲೇಖನ ಚಿಹ್ನೆಗಳನ್ನು ಬಳಸಿ ಬರೆಯಿರಿ)

________________________

## IV. ಚಟುವಟಿಕೆಗಳು :

೧. ಈ ಕಥೆಯನ್ನು ತರಗತಿಯಲ್ಲಿ ನಿಮ್ಮದೇ ಧಾಟಿಯಲ್ಲಿ ಹಾವಭಾವಗಳೊಂದಿಗೆ ಗಟ್ಟಿಯಾಗಿ ಹೇಳಿರಿ.
೨. ಅನ್ನದಾನದ ಮಹತ್ವ ಕುರಿತು ಗೆಳೆಯರೊಂದಿಗೆ ಚರ್ಚಿಸಿರಿ.
೩. 'ಅನ್ನದಾನ' ಕಥೆಯಲ್ಲಿ ಬರುವ ಪಾತ್ರಗಳನ್ನು ಹಂಚಿಕೊಂಡು ತರಗತಿಯಲ್ಲಿ ಅಭಿನಯಿಸಿರಿ.
೪. ಜಾನಪದ ಕಥೆಗಳನ್ನು ಓದಿ, ಕೇಳಿ ತಿಳಿಯಿರಿ.

* * * * * *

ಪಾಠ – ೩

# ಭರತ ಭೂಮಿ ನನ್ನ ತಾಯಿ




– ಕುವೆಂಪು

**ಪಾಠ ಪ್ರವೇಶ :** ಹೆತ್ತತಾಯಿ, ಹೊತ್ತಭೂಮಿ ಸ್ವರ್ಗಕ್ಕಿಂತಲೂ ಮಿಗಿಲು. ತಾಯಿ ಮಕ್ಕಳನ್ನು ಹೆತ್ತು ಸಾಕಿ ಸಲಹುತ್ತಾಳೆ. ಅದೇರೀತಿಯಲ್ಲಿ ಜನ್ಮಭೂಮಿಯೂ ನಮ್ಮನ್ನು ಹೊತ್ತು, ಗಾಳಿ, ನೀರು, ಬೆಳಕು, ಆಹಾರ ನೀಡಿ ಪೋಷಿಸುತ್ತದೆ. ಹೀಗಾಗಿ ನಾವೆಲ್ಲರು ಒಂದೇ ತಾಯಿಯ ಮಕ್ಕಳಂತೆ ಒಗ್ಗಟ್ಟಿನಿಂದ ಬದುಕಬೇಕು. ಈ ಭಾವದೊಂದಿಗೆ ಕವಿ ಕುವೆಂಪು ಅವರು ಭರತ ಭೂಮಿಯನ್ನು ತನ್ನ ಹೆತ್ತತಾಯಿ ಎಂದು ಬಣ್ಣಿಸಿದ್ದಾರೆ. ಇಲ್ಲಿಯ ಗಿರಿ, ಕಡಲು, ಹಸಿರು ಹಾಗೂ ನದಿಗಳ ಸೌಂದರ್ಯವನ್ನು ಸೊಗಸಾಗಿ ವರ್ಣಿಸಿದ್ದಾರೆ. ಭಾರತೀಯರಾದ ನಾವು ಮತಭೇದಗಳನ್ನು ತೊರೆದು, ಭಾಷಾ ಸಾಮರಸ್ಯದಿಂದ ಬದುಕುವ ಮೂಲಕ ದೇಶದ ಏಳಿಗೆಗೆ ಜೀವನವನ್ನೇ ಸಮರ್ಪಿಸಬೇಕೆಂಬ ಆಶಯ ಕವಿತೆಯಲ್ಲಿ ವ್ಯಕ್ತವಾಗಿದೆ.



ಭರತ ಭೂಮಿ ನನ್ನ ತಾಯಿ
　　ನನ್ನ ಪೊರೆವ ತೊಟ್ಟಿಲು
ಜೀವನವನೆ ದೇವಿಗೆರೆವೆ
　　ಬಿಡುತೆ ಗುಡಿಯ ಕಟ್ಟಲು

ತುಹಿನ ಗಿರಿಯ ಸಿರಿಯ ಮುಡಿಯ
ಹಿರಿಯ ಕಡಲು ತೊಳೆಯುವಡಿಯ
ಪೈರು ಪಚ್ಚೆ ಪಸುರಿನುಡೆಯ
ಭರತ ಭೂಮಿ ನನ್ನ ತಾಯಿ
　　ನನ್ನ ಪೊರೆವ ತೊಟ್ಟಿಲು:
ಜೀವನವನೆ ದೇವಿಗೆರೆವೆ
　　ಬಿಡುತೆ ಗುಡಿಯ ಕಟ್ಟಲು



ಸಿಂಧು, ಯಮುನೆ, ದೇವಗಂಗೆ
ತಪತಿ, ಕೃಷ್ಣೆ, ಭದ್ರೆ, ತುಂಗೆ
ಸಲಿಲ ತೀರ್ಥ ಪುಣ್ಯರಂಗೆ
ಭರತ ಭೂಮಿ ನನ್ನ ತಾಯಿ
　　ನನ್ನ ಪೊರೆವ ತೊಟ್ಟಿಲು:
ಜೀವನವನೆ ದೇವಿಗೆರೆವೆ
　　ಬಿಡುತೆ ಗುಡಿಯ ಕಟ್ಟಲು

ಮತದ ಬಿರುಕುಗಳನು ತೊರೆವೆ
ನುಡಿಗಳೊಡಕುಗಳನು ಮರೆವೆ
ತೊತ್ತ ತೊಡಕುಗಳನು ಬಿರಿವೆ
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

ಭರತ ಭೂಮಿ ನನ್ನ ತಾಯಿ
ನನ್ನ ಪೊರೆವ ತೊಟ್ಟಿಲು:
ಸ್ವಾತಂತ್ರ್ಯದ ಸ್ವರ್ಗಕೇರೆ
ಪುಣ್ಯದೇಣಿ ಮೆಟ್ಟಲು!

****

## ಕೃತಿಕಾರರ ಪರಿಚಯ :



**ಕುವೆಂಪು** ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಅವರು ದಿನಾಂಕ ೨೯-೧೨-೧೯೦೪ ರಂದು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಕುಪ್ಪಳಿಯಲ್ಲಿ ಜನಿಸಿದರು. ಇವರ ತಂದೆ ವೆಂಕಟಪ್ಪಗೌಡ, ತಾಯಿ ಸೀತಮ್ಮ. ತಾಯಿಯ ಊರು ಚಿಕ್ಕಮಗಳೂರು ಜಿಲ್ಲೆಯ ಹಿರೇಕೂಡಿಗೆ. ಹೇಮಾವತಿ ಇವರ ಹೆಂಡತಿ.

'ಚಂದ್ರಮಂಚಕೆ ಬಾ ಚಕೋರಿ', 'ನವಿಲು', 'ಪಕ್ಷಿಕಾಶಿ' (ಕವನ ಸಂಕಲನಗಳು). 'ಬೆರಳ್‌ಗೆ ಕೊರಳ್', 'ಶೂದ್ರತಪಸ್ವಿ', 'ಜಲಗಾರ' (ನಾಟಕಗಳು). 'ನನ್ನ ದೇವರು ಮತ್ತು ಇತರ ಕತೆಗಳು' (ಸಣ್ಣಕಥೆ). 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು'(ಕಾದಂಬರಿಗಳು). 'ಶ್ರೀ ರಾಮಾಯಣ ದರ್ಶನಂ' (ಮಹಾಕಾವ್ಯ) – ಇವೇ ಮೊದಲಾದ ಕೃತಿಗಳನ್ನು ಕುವೆಂಪು ರಚಿಸಿದ್ದಾರೆ.

ಅವರ 'ಶ್ರೀ ರಾಮಾಯಣ ದರ್ಶನಂ' ಕೃತಿಗೆ ಜ್ಞಾನಪೀಠ ಪ್ರಶಸ್ತಿ (೧೯೬೮) ಲಭಿಸಿದೆ. ಜೊತೆಗೆ ಪದ್ಮಭೂಷಣ (೧೯೫೮), ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೫೫), ರಾಷ್ಟ್ರಕವಿ (೧೯೬೪), ಪಂಪ ಪ್ರಶಸ್ತಿ ಹಾಗೂ ಕರ್ನಾಟಕ ರತ್ನ ಪ್ರಶಸ್ತಿಗಳೂ ಲಭಿಸಿವೆ. ಪ್ರಸ್ತುತ **'ಭರತ ಭೂಮಿ ನನ್ನ ತಾಯಿ'** ಕವಿತೆಯನ್ನು ಕುವೆಂಪು ಅವರ 'ಸಮಗ್ರ ಕಾವ್ಯ ಸಂಪುಟ ೧' ರಿಂದ ಆಯ್ಕೆಮಾಡಲಾಗಿದೆ. ಇವರು ದಿನಾಂಕ ೧೦-೧೧-೧೯೯೪ ರಲ್ಲಿ ನಿಧನರಾದರು.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಏಣೆ** – ನಿಚ್ಚಣಿಕೆ
**ಗುಡಿ** – ದೇವಾಲಯ; ಪತಾಕೆ; ಬಾವುಟ.
**ತೊಡರು** – ಕಟ್ಟು; ಬಂಧನ; ತೊಡಕು.
**ತೊರೆ** – ಬಿಡು; ತ್ಯಜಿಸು.
**ಬಿರಿ** – ಒಡೆ; ಅರಳು; ಬಿರುಕು.
**ಬಿರುಕು** – ಒಡಕು; ಸೀಳು; ವೈಮನಸ್ಸು.
**ಮುಡಿ** – ತಲೆ; ಧರಿಸು.
**ಹಿಂಭಾಗ** – ಹೊದಿಕೆ
**ಕಡಲು** – ಸಮುದ್ರ
**ತುಹಿನ** – ಹಿಮ; ಮಂಜು.
**ತೊತ್ತು** – ದಾಸಿ; ಸೇವಕಿ; ಊಳಿಗ.
**ಪೊರೆ** – ಕಾಪಾಡು; ಸಲಹು; ರಕ್ಷಿಸು.
**ಬಿಡುತೆ** – ಸ್ವಾತಂತ್ರ್ಯ; ಬಿಡುಗಡೆ.
**ಮರೆ** – ಮರೆತುಬಿಡು
**ಸಲಿಲ** – ನೀರು
**ಹೊರೆ** – ರಕ್ಷಿಸು; ಸಲಹು; ಭಾರ.

–: ಗಮನಿಸಿರಿ :–

**ಭರತ ಭೂಮಿ** – ಭಾರತದೇಶ, ಭಾರತಾಂಬೆ.
**ಮತದ ಬಿರುಕು** – ಜಾತಿ ಮತಗಳಿಂದಾಗುವ ಒಡಕು.
**ಪೊರೆವ ತೊಟ್ಟಿಲು** – ರಕ್ಷಿಸುವ ಸ್ಥಾನ (ತೊಟ್ಟಿಲು).
**ನುಡಿಗಳೊಡಕು** – ಭಾಷಾ ಭಿನ್ನತೆಯ ಭಾವ.
**ಜೀವನವನೆ ದೇವಿಗೆರೆವೆ** – ಸಮರ್ಪಣಾ ಭಾವ.

### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕವಿ ಕುವೆಂಪು ಅವರು ಭಾರತ ದೇಶವನ್ನು ಯಾರಿಗೆ ಹೋಲಿಸಿದ್ದಾರೆ?
೨. ಭಾರತ ದೇಶದ ಸಿರಿಮುಡಿ ಯಾವುದು?
೩. ಕವಿ ಕುವೆಂಪು ಅವರು ಗಂಗಾ ನದಿಯನ್ನು ಏನೆಂದು ಕರೆದಿದ್ದಾರೆ?
೪. ಯಾವ ಬಿರುಕುಗಳನ್ನು ತೊರೆಯಬೇಕೆಂದು ಕವಿ ಕುವೆಂಪು ಹೇಳುತ್ತಾರೆ?
೫. ಕವಿ ಕುವೆಂಪು ಜೀವನವನ್ನು ಯಾರಿಗೆ ಎರೆಯುವೆ ಎನ್ನುತ್ತಾರೆ?
೬. ಕುವೆಂಪು ಅವರ ಯಾವ ಕೃತಿಗೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ?

ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕುವೆಂಪು ಅವರು ಭಾರತದ ಪ್ರಾಕೃತಿಕ ಸಿರಿಯನ್ನು ಏನೆಂದು ವರ್ಣಿಸಿದ್ದಾರೆ?

೨. ನಮ್ಮ ಭಾರತ ದೇಶದಲ್ಲಿ ಹರಿಯುವ ಪ್ರಮುಖ ನದಿಗಳಾವುವು?

೩. ಮತದ ಬಿರುಕುಗಳನ್ನು ಏಕೆ ತೊರೆಯಬೇಕು?

ಇ) ಕೆಳಗಿನ ಪ್ರಶ್ನೆಗೆ ಏಳು–ಎಂಟು ವಾಕ್ಯಗಳಲ್ಲಿ ಉತ್ತರಿಸಿ.

೧. ಕುವೆಂಪು ಅವರು ಭರತ ಭೂಮಿಯನ್ನು ಯಾವ ರೀತಿಯಲ್ಲಿ ವರ್ಣಿಸಿದ್ದಾರೆ?

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ಗಿರಿ –

೨. ಕಡಲು –

೩. ಭೂಮಿ –

೪. ತಾಯಿ –

೫. ನುಡಿ –



ಆ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಪಾಪ x ________

೨. ಸ್ವರ್ಗ x ________

೩. ಸ್ವಾತಂತ್ರ್ಯ x ________

೪. ಮರೆ x ________

೫. ಹಿರಿಯ x ________

ಇ) ಪದ್ಯದಲ್ಲಿ ಬಳಕೆಯಾಗಿರುವ ಪ್ರಾಸಪದಗಳನ್ನು ಆಯ್ದು ಬರೆಯಿರಿ.

**ಉದಾ:** ತೊಟ್ಟಿಲು – ಕಟ್ಟಲು

**ಈ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ದೇವಿಗೆರೆವೆ = ______________ + ______________

೨. ತೊಳೆಯುವಡಿಯ = ______________ + ______________

೩. ನುಡಿಗಳೊಡಕುಗಳನು = ______________ + ______________

೪. ಸ್ವರ್ಗಕೇರಿ = ______________ + ______________

೫. ಪುಣ್ಯದೇಣಿ = ______________ + ______________

**ಉ) ಈ ಕೆಳಗಿನ ಸೂಕ್ತಿಗಳನ್ನು ವಿವರಿಸಿ ಬರೆಯಿರಿ.**

೧. ಜನನಿ, ಜನ್ಮಭೂಮಿ ಸ್ವರ್ಗಕ್ಕಿಂತಲೂ ಮಿಗಿಲು.

೨. ದೇಶ ಸೇವೆಯೇ ಈಶ ಸೇವೆ.

## IV. ಚಟುವಟಿಕೆಗಳು :

೧. 'ಭರತ ಭೂಮಿ ನನ್ನ ತಾಯಿ' ಪದ್ಯವನ್ನು ರಾಗಬದ್ಧವಾಗಿ ಹಾಡಿರಿ.

೨. ಪ್ರಸ್ತುತ ಪದ್ಯವನ್ನು ಕಂಠಪಾಠ ಮಾಡಿರಿ.

೩. ಕುವೆಂಪು ಅವರ 'ಕನ್ನಡ ಎನೆ ಕುಣಿದಾಡುವುದೆನ್ನೆದೆ' ಪದ್ಯವನ್ನು ಸಂಗ್ರಹಿಸಿ ಓದಿರಿ.

೪. ಭಾರತದ ನಕಾಶೆಯಲ್ಲಿ ಈ ಪದ್ಯದಲ್ಲಿ ಬರುವ ನದಿಗಳನ್ನು ಗುರುತಿಸಿರಿ.

೫. ಕುಪ್ಪಳ್ಳಿಯ ಕವಿಶೈಲಕ್ಕೆ ಭೇಟಿ ನೀಡಿ.

****

ಪಾಠ – ೪

# ಕೈ ಬರೆಹ

B5J6M6

**ಪಾಠ ಪ್ರವೇಶ :** ಕನ್ನಡ ಲಿಪಿಯ ಸೌಂದರ್ಯದ ಬಗೆಗೆ ಅನೇಕ ಕವಿಗಳು ಹೊಗಳಿದ್ದಾರೆ. ಕನ್ನಡ ಪ್ರಪಂಚದಲ್ಲಿಯೇ ಅತ್ಯಂತ ಸುಂದರವಾದ ಬರೆಹ ಎನ್ನುವ ಖ್ಯಾತಿಯನ್ನು ಪಡೆದಿದೆ. ಅದು ಪೂರ್ಣಚಂದ್ರನಂತೆ, ಮುತ್ತಿನಂತೆ ರೂಪವನ್ನು ಹೊಂದಿದ್ದು, ನೋಡುಗರ ಮನವನ್ನು ಸೆಳೆಯುವಂತಿದೆ. ಅಂದವಾದ ಬರವಣಿಗೆ ನಮ್ಮ ವ್ಯಕ್ತಿತ್ವದ ಕನ್ನಡಿ. ಶುದ್ಧ ಬರವಣಿಗೆ ಶುದ್ಧ ವ್ಯಕ್ತಿತ್ವವನ್ನು, ಶಿಸ್ತಿನ ಬರವಣಿಗೆ ಶಿಸ್ತಿನ ಜೀವನವನ್ನು, ಸ್ವಚ್ಛ ಬರವಣಿಗೆ ಸ್ವಚ್ಛ ಮನಸ್ಸನ್ನು ಸೂಚಿಸುತ್ತದೆಂದು ಬಲ್ಲವರು ಹೇಳುತ್ತಾರೆ. ಹೀಗಾಗಿ ಸುಂದರವಾದ ಬರವಣಿಗೆಯನ್ನು ರೂಢಿಸಿಕೊಳ್ಳಲು ಸಹಾಯಕವಾಗುವ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಮಕ್ಕಳೇ... ಫಲಕಗಳ ಬರವಣಿಗೆಯನ್ನು ಓದಿರಿ. ನಂತರ ಆಯಾ ಫಲಕದ ವಿಷಯವನ್ನು ಕೆಳಗೆ ನೀಡಲಾಗಿರುವ ಚೌಕದಲ್ಲಿ ಯಥಾವತ್ತಾಗಿ ಸ್ಪುಟವಾಗಿ ಬರೆಯಿರಿ.

**ಫಲಕ – ೧**

## ಫಲಕ – ೪

[illegible]



**ಈ ಕೆಳಗಿನ ಪ್ರಶ್ನೆಗಳನ್ನು ತರಗತಿಯಲ್ಲಿ ಚರ್ಚಿಸಿರಿ. ಚರ್ಚೆಯಲ್ಲಿ ಎಲ್ಲಾ ಮಕ್ಕಳು ಪಾಲ್ಗೊಳ್ಳಲಿ, ಎಲ್ಲಾ ಮಕ್ಕಳು ಮುಕ್ತವಾಗಿ ಅವರವರ ಅಭಿಪ್ರಾಯ ಹೇಳಲು ಅವಕಾಶ ನೀಡಿರಿ.**

೧. ನಿಮಗೆ ಯಾವ ಫಲಕದಲ್ಲಿನ ಬರವಣಿಗೆಯನ್ನು ಓದಲು ಕಷ್ಟವಾಯಿತು? ಏಕೆ?
೨. ನಿಮಗೆ ಯಾವ ಫಲಕದಲ್ಲಿನ ಬರವಣಿಗೆ ಓದಲು ಸುಲಭವಾಯಿತು? ಏಕೆ?
೩. ನಿಮ್ಮ ಬರವಣಿಗೆ ಹಾಗೂ ಫಲಕದಲ್ಲಿನ ಬರವಣಿಗೆಗೂ ಯಾವ ವ್ಯತ್ಯಾಸಗಳಿವೆ?
೪. ಬರವಣಿಗೆ ಉತ್ತಮವಾಗಿರಬೇಕು ಏಕೆ?
೫. ಉತ್ತಮ ಬರವಣಿಗೆಯನ್ನು ರೂಢಿಸಿಕೊಳ್ಳುವುದು ಹೇಗೆ?
೬. ಬರವಣಿಗೆಯಲ್ಲಿನ ಅಕ್ಷರ ಹಾಗೂ ಪದಗಳು ಅಸ್ಪಷ್ಟವಾಗಿದ್ದಾಗ ಅವುಗಳನ್ನು ಅರ್ಥಮಾಡಿಕೊಳ್ಳುವುದು ಹೇಗೆ?

**ಉತ್ತಮ ಕೈ ಬರಹದ ಲಕ್ಷಣಗಳನ್ನು ಓದಿ ಕಲಿತುಕೊಳ್ಳಿರಿ.**

೧. ನೀವು ಬರೆಯುವ ಅಕ್ಷರಗಳು ಸ್ಫುಟವಾಗಿರಬೇಕು. ಅಂದರೆ ಅಕ್ಷರಗಳು ಕಣ್ಣಿಗೆ ಸುಲಭವಾಗಿ ಗುರುತಿಸುವಂತಿರಬೇಕು.

೨. ಅಕ್ಷರಗಳನ್ನು ತಪ್ಪಿಲ್ಲದೆ, ಕಾಗುಣಿತ ದೋಷಗಳು ಇಲ್ಲದಂತೆ ಬರೆಯಬೇಕು.

೩. ಅಕ್ಷರಗಳು ಒಂದೇ ಗಾತ್ರದಲ್ಲಿರಬೇಕು ಅಂದರೆ, ಒಂದು ಚಿಕ್ಕದು, ಒಂದು ದೊಡ್ಡದು ಆಗಿರಬಾರದು.

೪. ಅಕ್ಷರಗಳು ಬಿಡಿಬಿಡಿ ಆಗಿರಬೇಕು. ಕೂಡಿಸಿ ಬರೆಯಬಾರದು.

೫. ಅಕ್ಷರ, ಪದ ಹಾಗೂ ಸಾಲುಗಳ ನಡುವೆ ನಿರ್ದಿಷ್ಟ ಅಂತರವನ್ನು ನೀಡಬೇಕು.

೬. ಸಾಲುಗಳು ನೇರವಾಗಿರಬೇಕು.

೭. ಅಕ್ಷರಗಳನ್ನು ಎಡಕ್ಕೆ ಇಲ್ಲವೇ ಬಲಕ್ಕೆ ಬಾಗಿಸಿ ಬರೆಯಬಾರದು. ಅಂದರೆ ನೇರ ನಿಲುವು ಇರಬೇಕು.

೮. ನಿರ್ದಿಷ್ಟ ವೇಗದಲ್ಲಿ ಬರೆಯಬೇಕು. ಚಿತ್ತುಕಾಟು ಮಾಡಬಾರದು. ಒತ್ತಿ ಬರೆಯಬಾರದು.

೯. ನಿಮ್ಮ ಬರವಣಿಗೆಯನ್ನು ಇತರರು ನೋಡಿ ಸಂತೋಷ ಪಡುವಂತಿರಬೇಕು.



## ಅಭ್ಯಾಸ

### I. ಪ್ರಶ್ನೆಗಳು :

**(ಫಲಕಗಳಲ್ಲಿರುವ ವಿಷಯವನ್ನು ಓದಿ ಉತ್ತರ ಬರೆಯಿರಿ)**

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪಿಸುಮಾತಿನ ಗುಂಬಸ್ ಎಲ್ಲಿದೆ?

೨. ಗೋಳಗುಮ್ಮಟದ ಸುತ್ತಳತೆ (ವ್ಯಾಸ) ಎಷ್ಟು ಅಡಿ ಇದೆ?

೩. ಫರ್ಡಿನೆಂಡ್ ಕಿಟೆಲ್ ಯಾವ ದೇಶದವರು?

೪. ಫರ್ಡಿನೆಂಡ್ ಕಿಟೆಲ್ ರಚಿಸಿದ ನಿಘಂಟಿನ ಹೆಸರೇನು?

೫. ಫರ್ಡಿನೆಂಡ್ ಕಿಟೆಲ್ ರಚಿಸಿದ ನಿಘಂಟಿನಲ್ಲಿ ಎಷ್ಟು ಶಬ್ದಗಳಿವೆ?

೬. ಮೈಸೂರು ಅರಮನೆಯ ವಾಸ್ತುಶಿಲ್ಪಿಗಳು ಯಾರು?

೭. ಕಾಳಿ ನದಿಗೆ ಅಡ್ಡಲಾಗಿ ಕಟ್ಟಿರುವ ಜಲಾಶಯ ಎಲ್ಲಿದೆ?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಗೋಲಗುಂಬಸ್‌ನ ವಿಶೇಷವೇನು?

೨. ಕಾಳಿ ನದಿ ಎಲ್ಲಿ ಹುಟ್ಟಿ, ಯಾವ ಮಾರ್ಗವಾಗಿ ಹರಿಯುತ್ತದೆ?

೩. ಮೈಸೂರು ಅರಮನೆಯ ಸೊಬಗನ್ನು ವರ್ಣಿಸಿ.

೪. ಫರ್ಡಿನೆಂಡ್ ಕಿಟೆಲ್ ಭಾರತಕ್ಕೆ ಬಂದು ಮಾಡಿದ ಕೆಲಸವೇನು?

**ಇ) ಕೆಳಗಿನ ಪ್ರಶ್ನೆಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಉತ್ತಮ ಕೈಬರಹದ ಲಕ್ಷಣಗಳನ್ನು ಪಟ್ಟಿಮಾಡಿರಿ.

## II. ಭಾಷಾಭ್ಯಾಸಗಳು :

**ಅ) ನಿಘಂಟಿನ ಸಹಾಯದಿಂದ ಈ ಪದಗಳಿಗೆ ಅರ್ಥ ಬರೆಯಿರಿ.**

೧. ಸೌಧ –

೨. ನಿರ್ಮಾತೃ –

೩. ಹಸ್ತಪ್ರತಿ –

೪. ಪರಿಷ್ಕರಿಸಿ –

೫. ತಾಣ –

೬. ಪಾದ್ರಿ –



**ಆ) ಕೆಳಗಿನ ಪದಗಳನ್ನು ಸ್ವಂತವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಕಂಗೊಳಿಸು : ________________

೨. ಸಾವಕಾಶ : ________________

೩. ಸಹಕಾರಿ : ________________

೪. ಯಶಸ್ಸು : ________________

೫. ವ್ಯಾಸಂಗ : ________________

ಇ) ಕೆಳಗಿನ ನೀಡಿರುವ ವಾಕ್ಯದಲ್ಲಿನ ಪದಗಳನ್ನು ಸರಿಯಾಗಿ ಜೋಡಿಸಿ ಅರ್ಥಪೂರ್ಣ ವಾಕ್ಯವಾಗಿ ಬದಲಿಸಿ ಬರೆಯಿರಿ.

೧. ಕಂಗೊಳಿಸುತ್ತದೆ ವೇಳೆ ರಾತ್ರಿ ಅರಮನೆ ವಿದ್ಯುದ್ದೀಪಗಳಿಂದ ಮೈಸೂರು.

೨. ನಿಘಂಟಿನ ಪ್ರಕಟಿಸಲಾಯಿತು ಹಸ್ತಪ್ರತಿಯನ್ನು ಪಂಡಿತರ ಪರಿಷ್ಕರಿಸಿ ನೆರವಿನಿಂದ.

೩. ತಾಣ ಕನ್ನಡ ಹಲವು ನಾಡು ನದಿಗಳ.

ಈ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

೧. ಅತ್ಯುತ್ತಮ = ______________ + ______________

೨. ಲಕ್ಷಾಂತರ = ______________ + ______________

೩. ವಿದ್ಯುದ್ದೀಪ = ______________ + ______________

೪. ಗೋಲಾಕಾರ = ______________ + ______________



ಉ) ಕೆಳಗಿನ ಪದಗಳಿಗೆ ಗ್ರಾಂಥಿಕ ರೂಪವನ್ನು ಬರೆಯಿರಿ.

೧. ಐತಿ –

೨. ಬಾಳ –

೩. ಗ್ವಾಡಿ –

೪. ಮ್ಯಾಲ –

೫. ಇದಕ –

೬. ಬಂದೈತಿ –

೭. ಒಳ್ಗ –

೮. ಕೇಳಿಸ್ತೈತಿ –

"ಕೆಟ್ಟ ಅಕ್ಷರದ ಬರವಣಿಗೆ ಅಪಕ್ವ ಮತ್ತು ಅಪೂರ್ಣ ಶಿಕ್ಷಣದ ಚಿಹ್ನೆ"

– ಮಹಾತ್ಮಾ ಗಾಂಧೀಜಿ

IV. ಪೂರಕ ಓದು :

## ಲಿಪಿ ಲತೆ

ಎಂಥ ಚಂದದ ಬಳ್ಳಿ ಚೆಲ್ಲವರಿದಿಹುದಿಲ್ಲಿ
ಚೆಲುವನರಸುವ ಜಾಣ ಬಂದು ನೋಡು
ಕನ್ನಡದ ಲಿಪಿಯಲ್ಲಿ ಕನ್ನಡದ ಕಲೆ ಎಲ್ಲೆ –
ಯನೆ ನಿಲುಕಿ ನಿಂದಿಹುದು ನೋಡಿ ಹಾಡು.

ನಾಡ ಸೊಬಗೇ ಮರಳಿ ನಾಡಿಗರ ಹೃದಯದಲಿ
ಹೊಳೆದು ಕರದಿಂದಿಳಿದು ಬಂದಿರುವುದೇ?
ಹೂಬಳ್ಳಿಯಂದದಲಿ ಸುಳಿದಿಂತು ಚೆಂದದಲಿ
ಲಿಪಿಯ ರೂಪವನಾಂತು ನಿಂದಿರುವುದೇ?

ಮೊಗ್ಗಿನಂದದಿ ಕೆಲವು ಮಲರಿನಂದದಿ ಹಲವು
ಕುಡಿ, ಹೀಚು, ಮಿಡಿ ಕಾಯ್ಗಳಂತೆ ಕೆಲವು
ಕನ್ನಡಕ್ಕರಗಳಿವು ಬಳ್ಳಿಯನು ಏರಿಹವು
ಬಗೆಯ ಬಳ್ಳಿಯನೆ ಅಲ್ಲಾಡಿಸುವವು.

ಕಲ್ಲಿನಲಿ, ಕಾವ್ಯದಲಿ, ಓಲೆಯಲಿ, ಲೋಹದಲಿ
ಭಿತ್ತಿಯಲಿ ಈ ಬಳ್ಳಿ ಸುಳಿದಿರುವುದು.
ಚಾಲುಕ್ಯ ಕಲಚೂರ್ಯ ಹೊಯ್ಸಳಾಧೀಶ್ವರರ
ಯುಗಗಳಲಿ ಹೊಗರೇರಿ ಹರಡಿರುವುದು.

ಕನ್ನಡಿಗರಾಂತರ್ಯದಿಂದಲೇ ಸೌಂದರ್ಯ–
ಲತೆ ಕೊನರಿ ನನೆಕೊನೆಯ ತಳೆದು ಬೆಳೆದು
ಕನ್ನಡಮ್ಮನ ಕೊರಳ ಸರಕೆ ಮಲ್ಲಿಗೆಯರಳ
ಸಲ್ಲಿಸುವುದವಳಡಿಯ ಬಳಿಗೆ ಸುಳಿದು.

– ಡಿ. ಎಸ್. ಕರ್ಕಿ

* * * *

### ಪದ್ಯ – ೫




# ಅನ್ನದಾತ

– ಸತ್ಯಾರ್ಥಿ

**ಪದ್ಯ ಪ್ರವೇಶ :** ‘ಉಪ್ಪರಿಗೆ ಮನೆಯವರಾದರೂ ಉಪ್ಪಿಲ್ಲದೆ ಉಣ್ಣಲಾರರು’, ‘ಆಗರ್ಭ ಶ್ರೀಮಂತರೂ ಸಹ ಅನ್ನವನ್ನಲ್ಲದೆ ಚಿನ್ನವನ್ನು ತಿನ್ನಲಾರರು’ ಈ ನುಡಿ ಮುತ್ತುಗಳು ಆಹಾರದ ಮಹತ್ವವನ್ನು ತಿಳಿಸುತ್ತವೆ. ನಾವು ಊಟಮಾಡುವ ಆಹಾರ ರೈತನ ಬೆವರಿನ ಫಲ. ಆತ ಭೂಮಿಯನ್ನು ಹಸನು ಮಾಡಿ, ಬೀಜವನ್ನು ಬಿತ್ತಿ, ಗೊಬ್ಬರಹಾಕಿ, ನೀರು ಉಣಿಸಿ ಹಾರೈಕೆ ಮಾಡಿ, ಆಹಾರವನ್ನು ನಾಡಿಗೆ ಹಂಚುತ್ತಾನೆ. ಹೀಗಾಗಿಯೇ ರೈತನನ್ನು ನಮ್ಮ ದೇಶದ ಬೆನ್ನೆಲುಬು ಎಂದು ಕರೆಯುತ್ತೇವೆ. ರೈತ ಕಷ್ಟಪಟ್ಟು ದುಡಿದು ನಾಡಿನ ಜನರ ಹಸಿವನ್ನು ನೀಗುತ್ತಾನೆ. ಅಂತಹ ರೈತನ ದುಡಿಮೆಯನ್ನು ಅನೇಕ ಕವಿಗಳು ಕೊಂಡಾಡಿದ್ದಾರೆ. ಹಾಡುಕಟ್ಟಿ ನಮನ ಸಲ್ಲಿಸಿದ್ದಾರೆ. ಅಂತಹ ರೈತನನ್ನು ‘ನೇಗಿಲ ಯೋಗಿ’, ‘ಅನ್ನದಾತ’ ಎಂದು ಕರೆಯಲಾಗಿದೆ.

ಇವನೆ ನೋಡು ಅನ್ನದಾತ
ಹೊಲದಿ ದುಡಿದೆ ದುಡಿವನು
ನಾಡ ಜನರು ಬದುಕಲೆಂದು
ದವಸ ಧಾನ್ಯ ಬೆಳೆವನು ॥ ೧ ॥





ಮಳೆಯ ಗುಡುಗು ಚಳಿಯ ನಡುಗು
ಬಿಸಿಲ ಬೇಗೆ ಸಹಿಸುತ
ಬೆವರು ಸುರಿಸಿ ಕಷ್ಟ ಸಹಿಸಿ
ಒಂದೆ ಸಮನೆ ದುಡಿಯುತ ॥ ೨ ॥

ಗಟ್ಟಿ ದೇಹ ದೊಡ್ಡ ಮನಸು
ದೇವನಿಂದ ಪಡೆದನು
ಯೋಗಿಯಾಗಿ ತ್ಯಾಗಿಯಾಗಿ
ಅನ್ನ ನೀಡುತಿರುವವನು ॥ ೩ ॥

ಎತ್ತು ಎರಡು ಅವನ ಜೋಡು
ಕೂಡಿ ದುಡಿವ ಗೆಳೆಯರು
ಹಿಗ್ಗು ಕುಗ್ಗು ಏನೆ ಇರಲಿ
ಹೊಂದಿಕೊಂಡು ನಡೆವರು ॥ ೪ ॥



* * * *

## ಕೃತಿಕಾರರ ಪರಿಚಯ :



**ಸತ್ಯಾರ್ಥಿ** ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ **ಚೆನ್ನಬಸಪ್ಪ ಹೊಸಮನಿ** ಅವರು ೧೯೩೮ ರಲ್ಲಿ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಒಕ್ಕುಂದ ಗ್ರಾಮದಲ್ಲಿ ಜನಿಸಿದರು. ಇವರು 'ದಿವ್ಯ ಜೀವಿ', 'ಕಿತ್ತೂರ ವೀರಶ್ರೀ', 'ಮಕ್ಕಳ ಸೊಗಸು', 'ಪುಟ್ಟ ಭಾರತ', 'ಅನ್ನದಾತ ಮತ್ತು ಇತರ ಕವಿತೆಗಳು' ಮುಂತಾದ ಕವನ ಸಂಕಲನಗಳನ್ನು, 'ಪುಟ್ಟನ ಕನಸು' ಎಂಬ ಮಕ್ಕಳ ಕಾದಂಬರಿಯನ್ನು, 'ವೀರಸ್ವರ್ಗದಲ್ಲ ಭಾರತೀಯರು', 'ತಿರುಳ್ಗನ್ನಡ ಕನ್ನಡತಿಯರು' ಎಂಬ ನಾಟಕಗಳನ್ನು ರಚಿಸಿದ್ದಾರೆ. ಪ್ರಸ್ತುತ ಪದ್ಯವನ್ನು 'ಅನ್ನದಾತ ಮತ್ತು ಇತರ ಕವಿತೆಗಳು' ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಶ್ರೀಯುತರಿಗೆ ಅವರ ಅಭಿಮಾನಿ ಬಳಗ 'ಸತ್ಯಾರ್ಥಿ' ಎನ್ನುವ ಅಭಿನಂದನ ಗ್ರಂಥವನ್ನು ಸಮರ್ಪಿಸಿದೆ.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅನ್ನ** – ಆಹಾರ
**ತ್ಯಾಗಿ** – ತ್ಯಾಗ ಮಾಡುವವನು; ವಿರಾಗಿ.
**ದಾತ** – ದಾನಿ; ಒಡೆಯ; ಕೊಡುವವ.
**ನಾಡ** – ನಾಡಿನ; ಪ್ರಾಂತದ.
**ಹೊಲ** – ಜಮೀನು; ಕೃಷಿ ಭೂಮಿ.
**ಅನ್ನದಾತ** – ರೈತ
**ದವಸಧಾನ್ಯ** – ಆಹಾರ ಪದಾರ್ಥಗಳು
**ದುಡಿ** – ಕೆಲಸಮಾಡು; ಶ್ರಮಪಡು.
**ಸಹಿಸು** – ತಾಳಿಕೊಳ್ಳು; ಸೈರಿಸು.
**ಬೇಗೆ** – ಉರಿ; ಉಷ್ಣತೆ.

### ಟಿಪ್ಪಣಿ :

**ಯೋಗಿ** – ನಿಯಮಬದ್ಧವಾಗಿ ಕಾರ್ಯನಿರ್ವಹಿಸುತ್ತ ಜೀವನ ನಡೆಸುವವ, ಯೋಗದಲ್ಲಿ ನಿರತನಾದವ.
**ಹಿಗ್ಗುಕುಗ್ಗು** – ಏರುಪೇರು, ಉತ್ಸಾಹ ನಿರಾಸೆ, ಕೆಲವೊಮ್ಮೆ ಆನಂದ, ಮಗದೊಮ್ಮೆ ದುಃಖ.
**ಗುಡುಗು** – ಮಳೆಗಾಲದಲ್ಲಿ ಮೋಡಗಳ ಘರ್ಷಣೆಯಿಂದ ಉಂಟಾಗುವ ಶಬ್ದ.



### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಅನ್ನದಾತ ಎಂದು ಯಾರನ್ನು ಕರೆಯಲಾಗುತ್ತದೆ?
೨. ರೈತನನ್ನು ಅನ್ನದಾತ ಎಂದು ಏಕೆ ಕರೆಯಲಾಗುತ್ತದೆ?
೩. ಅನ್ನದಾತ ಎಲ್ಲಿ ದುಡಿಯುವನು?
೪. ಅನ್ನದಾತನು ದವಸಧಾನ್ಯಗಳನ್ನು ಯಾರಿಗಾಗಿ ಬೆಳೆಯುವನು?
೫. ಅನ್ನದಾತನು ಯಾವ ಕಷ್ಟಗಳನ್ನು ಸಹಿಸುತ್ತಾನೆ?
೬. ರೈತನು ದೇವರಿಂದ ಪಡೆದ ವರ ಯಾವುದು?
೭. ಅನ್ನದಾತನ ಗೆಳೆಯರು ಯಾರು?
೮. ಚೆನ್ನಬಸಪ್ಪ ಹೊಸಮನಿಯವರ ಕಾವ್ಯನಾಮವೇನು?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅನ್ನದಾತನು ನಾಡಿಗೆ ಹೇಗೆ ಸಹಕಾರಿಯಾಗಿದ್ದಾನೆ?
೨. ರೈತನು ಎಂತಹ ಕಷ್ಟಗಳನ್ನು ಸಹಿಸಿಕೊಂಡು ದುಡಿಯುತ್ತಾನೆ?
೩. ರೈತನನ್ನು ಯೋಗಿ ತ್ಯಾಗಿ ಎಂದು ಏಕೆ ಕರೆಯಲಾಗುತ್ತದೆ?
೪. ಎತ್ತುಗಳ ಜೊತೆ ರೈತ ಯಾವ ರೀತಿಯ ಸಂಬಂಧ ಹೊಂದಿದ್ದಾನೆ?

ಇ) ಈ ಕೆಳಗಿನ ಪ್ರಶ್ನೆಗಳಿಗೆ ಆರು–ಏಳು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕವಿ ರೈತನ ದುಡಿಮೆಯನ್ನು ಯಾವ ರೀತಿ ವರ್ಣಿಸಿದ್ದಾರೆ?
೨. ರೈತನು ಬೆಳೆಯುವ ಬೆಳೆಗಳನ್ನು ಪಟ್ಟಿ ಮಾಡಿ.

## III. ಭಾಷಾಭ್ಯಾಸ :

ಅ) 'ಅ' ಪಟ್ಟಿಗೆ ಸರಿ ಹೊಂದುವ ಪದವನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ೧. ಅನ್ನದಾತ | ಅ) ಧಾನ್ಯ | ________ |
| ೨. ಮಳೆ | ಆ) ಕುಗ್ಗು | ________ |
| ೩. ಚಳಿ | ಇ) ರೈತ | ________ |
| ೪. ಹಿಗ್ಗು | ಈ) ಗುಡುಗು | ________ |
| ೫. ದವಸ | ಉ) ನಡುಗು | ________ |

ಆ) ಗುಂಪಿಗೆ ಸೇರದಿರುವ ಪದವನ್ನು ಆರಿಸಿ ಬರೆಯಿರಿ.

೧. ಚಳಿಗಾಲ, ಮಳೆಗಾಲ, ನಡುಗಾಲ, ಬೇಸಿಗೆಕಾಲ. ________
೨. ಎತ್ತು, ಎಮ್ಮೆ, ಹೋರಿ, ನಂದಿ. ________
೩. ಬೆಟ್ಟ, ಹೊಲ, ತೋಟ, ಗದ್ದೆ. ________
೪. ಗೆಳೆಯ, ಸ್ನೇಹಿತ, ಮಿತ್ರ, ಶತ್ರು. ________
೫. ರೈತ, ಅನ್ನದಾತ, ಕೃಷಿಕ, ವ್ಯಾಪಾರಿ. ________

ಇ) ಕೃಷಿ ಸಂಬಂಧಿತ ಆರು ಪದಗಳನ್ನು ಬರೆಯಿರಿ.

**ಮಾದರಿ :** ಎತ್ತು

೧. ________ ೨. ________
೩. ________ ೪. ________
೫. ________ ೬. ________

**ಈ) 'ಅನ್ನದಾತ' ಪದ್ಯದಲ್ಲಿ ಬಳಕೆಯಾಗಿರುವ ಪ್ರಾಸ ಪದಗಳನ್ನು ಆಯ್ದು ಬರೆಯಿರಿ.**

**ಮಾದರಿ :** ದುಡಿವನು – ಬೆಳೆವನು

೧. ____________ ____________

೨. ____________ ____________

೩. ____________ ____________

**ಉ) ಇಲ್ಲಿರುವ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.**

೧. ದೊಡ್ಡಮನಸು : ______________________________

೨. ಹಿಗ್ಗು : ______________________________

೩. ತ್ಯಾಗಿ : ______________________________

೪. ಬೆವರು ಸುರಿಸಿ : ______________________________

೫. ಅನ್ನದಾತ : ______________________________



**ಊ) ಕೆಳಗಿನ ಕೋಷ್ಟಕದಲ್ಲಿ ಅನ್ನದಾತನಿಗೆ ಸಂಬಂಧಿಸಿದ ಪದಗಳಿವೆ. ಅವನ್ನು ನೀವು ಪತ್ತೆಹಚ್ಚಿ, ಮಾದರಿಯಂತೆ ಗೆರೆ ಎಳೆಯಿರಿ.**

| | | | | | | | | | |
|---|---|---|---|---|---|---|---|---|---|
| ಸ | ರೈ | ತ | ಗ | ಯೋ | ದ | ಣ | ಹಿ | ಮ | ಒ |
| ಕ | ಹೊ | ಪಿ | ನೇ | ಗಿ | ಲು | ನ | ಗ್ಗು | ದ | ಎ |
| ಗ | ಲ | ಪ | ಟ | ಚ | ಡ | ಜ | ಕು | ವ | ಕೃ |
| ಟ್ಟಿ | ಮ | ನ | ಅ | ನ್ನ | ದಾ | ತ | ಗ್ಗು | ಸ | ಷಿ |
| ದೇ | ರ | ಮ | ದ | ಚ | ಬ | ತೋ | ಟ | ಧಾ | ಕ |
| ಹ | ಬೆ | ಳೆ | ದೊ | ಡ್ಡ | ಮ | ನ | ಸು | ನ್ಯ | ಶ |
| ಗ | ಯ | ಸ | ಯ | ಎ | ಟ | ಬೆ | ವ | ರು | ಲು |
| ದ್ದೆ | ಜ | ರ | ಲ | ತ್ತು | ತ | ಪ | ಗ | ಪಾ | ಗು |

## IV. ಚಟುವಟಿಕೆಗಳು :

೧. ರೈತರು ಬಳಸುವ ಉಪಕರಣಗಳ ಹೆಸರನ್ನು ಪಟ್ಟಿಮಾಡಿರಿ.

೨. ರೈತರು ಬೆಳೆಯುವ ಬೆಳೆಗಳನ್ನು ಪಟ್ಟಿಮಾಡಿರಿ.

೩. ಕುವೆಂಪು ಅವರ 'ನೇಗಿಲ ಯೋಗಿ' ಪದ್ಯವನ್ನು ಓದಿರಿ.

೪. ನಿಮ್ಮ ಸಮೀಪದ ಗದ್ದೆಗಳಿಗೆ ಭೇಟಿನೀಡಿ ರೈತನ ಕೆಲಸಗಳನ್ನು ಗಮನಿಸಿ.

* * * * *

ಪಾಠ – ೬



# ಮಿತ್ರರ ಸಮಾಗಮ

**ಪಾಠ ಪ್ರವೇಶ :** ಮಕ್ಕಳೇ, ನಿಮಗೆ ಸ್ನೇಹಿತರಿದ್ದಾರಲ್ಲವೇ? ಸ್ನೇಹಕ್ಕೆ ಮಿಗಿಲಾದ ಸಂಬಂಧವಿಲ್ಲ, ಅದಕ್ಕೆ ಅಂತಸ್ತಿನ ಹಂಗಿಲ್ಲ, ಅಗಲಿದರೂ ಸ್ನೇಹದ ಸೆಳೆತ ಮರೆಯಲಾಗದು. ಅಗಲಿಕೆಯ ನಂತರ ಮತ್ತೆ ಗೆಳೆಯರಿಬ್ಬರು ಒಂದಾದ ಸ್ವಾರಸ್ಯ ಘಟನೆಯೊಂದು ಅಕ್ಬರ್–ಬೀರಬಲ್ ಅವರ ಕಥೆಗಳಲ್ಲಿ ಕಾಣಬರುತ್ತದೆ. ಅಕ್ಬರ್ ಮೊಗಲ್ ವಂಶದ ಪ್ರಸಿದ್ಧ ದೊರೆ. ಬೀರಬಲ್ ಅಕ್ಬರನ ಆಪ್ತ ಮಿತ್ರ. ಇವರಿಬ್ಬರು ಹಾಸ್ಯ ಹಾಗೂ ಬುದ್ಧಿವಂತಿಕೆಗೆ ಹೆಚ್ಚು ಜನಪ್ರಿಯರಾಗಿದ್ದಾರೆ. ಪ್ರಸ್ತುತ ಕತೆಯಲ್ಲಿ ಅಕ್ಬರ್–ಬೀರಬಲ್ ಇವರ ಗೆಳೆತನದ ಸ್ವಾರಸ್ಯಕರ ಪ್ರಸಂಗವೊಂದನ್ನು ಪರಿಚಯಿಸಲಾಗಿದೆ.

ಅಕ್ಬರ್, ಬೀರಬಲ್ ದೊರೆ ಮಂತ್ರಿಯಾಗಿದ್ದಂತೆ ಆತ್ಮೀಯ ಮಿತ್ರರೂ ಆಗಿದ್ದರು. ಒಮ್ಮೆ ಅಕ್ಬರ್ ಮಹಾಶಯನಿಗೆ ಬೀರಬಲ್ಲನ ಮೇಲೆ ಯಾವುದೋ ಕಾರಣಕ್ಕೆ ಅಸಮಾಧಾನ ಉಂಟಾಯಿತು. "ನಿನ್ನ ಮುಖವನ್ನು ತೋರಿಸಬೇಡ, ಎಲ್ಲಿಗಾದರೂ ಹೊರಟು ಹೋಗು" ಎಂದು ಬೀರಬಲ್‌ಗೆ ಆದೇಶಿಸಿದ. ಅಂದಿನಿಂದ ಬೀರಬಲ್ ಯಾರಿಗೂ ಕಾಣದಂತೆ ಮರೆಯಾದ.



ಕೆಲ ದಿನಗಳ ನಂತರ ಅಕ್ಬರನಿಗೆ ಬೀರಬಲ್ಲನನ್ನು ಕಾಣುವ ತವಕ ಉಂಟಾಯಿತು. ಅವನಿಗಾಗಿ ಹುಡುಕಾಡಿಸಿದ. ಬೀರಬಲ್ ಎಲ್ಲಿಯೂ ಸಿಗಲಿಲ್ಲ. "ಎಂಥ ಕೆಲಸ ಆಗಿಹೋಯಿತು." ಎಂದು ಅಕ್ಬರ್ ಚಿಂತಿಸತೊಡಗಿದ.

ಒಮ್ಮೆ ಅಕ್ಬರ್ ದರ್ಬಾರ್ ನಡೆಸುತ್ತಿರುವಾಗ ಸೇವಕನೊಬ್ಬ ಒಳಬಂದು "ಪ್ರಭು! ಅರಮನೆಯ ದ್ವಾರದಲ್ಲಿ ಒಬ್ಬ ಸಾಧು ಬಂದಿದ್ದಾರೆ. ಅವರ ಶಿಷ್ಯರು ಆ ಸಾಧು ವಿಶ್ವದಲ್ಲಿಯೇ ದೊಡ್ಡ ಮೇಧಾವಿ ಹಾಗೂ ತುಂಬಾ ಬುದ್ಧಿವಂತರೆಂದು ಹೇಳುತ್ತಿದ್ದಾರೆ" ಎಂದು ಹೇಳಿದ. ಅಕ್ಬರ್ ತಕ್ಷಣವೇ ಆ ಸಾಧುವನ್ನು ಬರಮಾಡಿಕೊಂಡನು.

ಅರಮನೆಯನ್ನು ಪ್ರವೇಶಿಸಿದ ಸಾಧು ತುಂಬಾ ತೇಜಸ್ವಿಯಾಗಿದ್ದ. ಅದೇ ಅವನೊಬ್ಬ ಬುದ್ಧಿವಂತನೆಂಬುದನ್ನು ಸಾರುತ್ತಿತ್ತು.

"ಸಾಧು ! ನೀನು ಬಹಳ ಬುದ್ಧಿವಂತನೆಂದು ಕೇಳಿದೆ. ನಿನ್ನನ್ನು ಪರೀಕ್ಷಿಸುವ ಸಲುವಾಗಿ ಆಸ್ಥಾನದ ಪಂಡಿತರು ನಿನಗೆ ಪ್ರಶ್ನೆಗಳನ್ನು ಕೇಳಲು ಹೇಳುತ್ತೇನೆ. ಸರಿಯಾಗಿ ಉತ್ತರಿಸಿದರೆ ಅಮೂಲ್ಯವಾದ ಉಡುಗೊರೆಗಳನ್ನು ನೀಡುತ್ತೇನೆ" ಎಂದನು ಅಕ್ಬರ್. ಆ ಮಾತಿಗೆ ಸಾಧು ಆಗಬಹುದು ಎಂದನು. ಅಕ್ಬರನ ಆಸ್ಥಾನದಲ್ಲಿ ತಾನ್‌ಸೇನ್, ತೋದರಮಲ್ಲ, ಅಬುಲ್ ಫಜಲ್, ಫೈಜಿ ಮೊದಲಾದ ವಿದ್ವಾಂಸರಿದ್ದರು. ಅವರು ಪ್ರಶ್ನಿಸತೊಡಗಿದರು. ಮೊದಲಿಗೆ...

**ಅಬುಲ್ ಫಜಲ್:** ಕಳೆದುಹೋದುದನ್ನು ಮತ್ತೆ ಪಡೆಯಲಾಗದ್ದು ಯಾವುದು?
**ಸಾಧು** : ಜೀವ, ಅವಕಾಶ, ಸಮಯ.
**ತೋದರಮಲ್ಲ** : ಜಗತ್ತಿನಲ್ಲಿ ಅತ್ಯುತ್ತಮನಾದ ಸ್ನೇಹಿತನಾರು?
**ಸಾಧು** : ಯುಕ್ತಾಯುಕ್ತ ಪರಿಜ್ಞಾನ, ವ್ಯಕ್ತಿಯ ಮುಂದಾಲೋಚನೆ.
**ಫೈಜಿ** : ವಿಶ್ವದಲ್ಲಿ ಅತ್ಯುತ್ತಮವಾದ ವಸ್ತು ಯಾವುದು?
**ಸಾಧು** : ಜ್ಞಾನ
(ವಿದ್ವಾಂಸರು ಕೇಳಿದ ಪ್ರಶ್ನೆಗಳಿಗೆ ಸಾಧು ಸರಾಗವಾಗಿ ಉತ್ತರಿಸುತ್ತಿದ್ದ)
**ಮಾನ್‌ಸಿಂಗ್** : ಒಬ್ಬ ವ್ಯಕ್ತಿಯ ಅತ್ಯುತ್ತಮವಾದ ಸಾಮರ್ಥ್ಯ ಯಾವುದು? ಮಾರುತಕ್ಕಿಂತ ವೇಗವಾದುದು ಯಾವುದು? ಅತ್ಯಂತ ಸಿಹಿಯಾದುದು ಯಾವುದು? ಎಂದು ಪ್ರಶ್ನೆಗಳ ಸುರಿಮಳೆಗರೆದ.
**ಸಾಧು** : ವ್ಯಕ್ತಿಯ ಅತ್ಯುತ್ತಮ ಸಾಮರ್ಥ್ಯ ಆತನ ಧೈರ್ಯ; ಮಾರುತಕ್ಕಿಂತ ವೇಗವಾದುದು ಮನುಷ್ಯನ ಕಲ್ಪನೆ; ಅತ್ಯಂತ ಸಿಹಿಯಾದದ್ದು ಮಗುವಿನ ನಗು.
**ತಾನ್‌ಸೇನ್** : ಸಂಗೀತದಲ್ಲಿ ಅವಿನಾಶಿ ಯಾವುದು?
**ಸಾಧು** : ಸ್ವರಗಳು.

ವಿದ್ವಾಂಸರೆಲ್ಲರು ಸಾಧುವಿನ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡರು. ಅನಂತರ ಅಕ್ಬರನೇ ಪ್ರಶ್ನಿಸತೊಡಗಿದ....

**ಅಕ್ಬರ್** : ರಾಜ್ಯಭಾರ ನಡೆಸುವಲ್ಲಿ ನೆರವಾಗುವ ಅತ್ಯಂತ ಮುಖ್ಯವಾದ ಅಂಶ ಯಾವುದು?
**ಸಾಧು** : ಕೌಶಲ.
**ಅಕ್ಬರ್** : ರಾಜನ ದೊಡ್ಡ ಶತ್ರು ಯಾರು?
**ಸಾಧು** : ಸ್ವಾರ್ಥ.



ಅಕ್ಬರ್ ಚಕ್ರವರ್ತಿ ಸಾಧುವಿನ ಉತ್ತರದಿಂದ ಸಂತಸಪಟ್ಟ. ಅವನಿಗೆ ತನ್ನ ಆಸ್ಥಾನದಲ್ಲಿ ಒಂದು ಸ್ಥಾನವನ್ನು ಕೊಡುವುದಾಗಿ ಹೇಳಿದ. ನಂತರ, “ಅಯ್ಯಾ ! ಸಾಧುಗಳಿಗೆ ವಿಶೇಷ ಶಕ್ತಿಗಳಿರುತ್ತವೆ ಎಂದು ಕೇಳಿದ್ದೇನೆ. ನಿನಗೆ ಅಂಥ ಯಾವುದಾದರೂ ಶಕ್ತಿ ಇದೆಯೇ?” ಎಂದು ಅಕ್ಬರ್ ಕೇಳಿದನು. ಆಗ ಸಾಧು, “ಹೌದು! ತಾವು ಯಾರನ್ನಾದರೂ ನೋಡುವ ಇಚ್ಛೆ ಇದ್ದರೆ ಅವರನ್ನು ನಿಮ್ಮ ಕಣ್ಮುಂದೆ ಕ್ಷಣಮಾತ್ರದಲ್ಲಿ ತಂದು ನಿಲ್ಲಿಸಬಲ್ಲೆ” ಎಂದನು. ಹಾಗಿದ್ದರೆ “ನನ್ನ ಮಂತ್ರಿ ಬೀರಬಲ್ ಕಾಣೆಯಾಗಿದ್ದಾನೆ. ಅವನನ್ನು ಕರೆದು ತಾ ನೋಡೋಣ” ಎಂದ ಅಕ್ಬರ್.

ಸಾಧು ನಿಧಾನವಾಗಿ ತನ್ನ ಗಡ್ಡ ಮೀಸೆಗಳನ್ನು ಕಳಚಿದ. ಎದುರಿಗೆ ಬೀರಬಲ್ ನಿಂತಿದ್ದ. ಸಾಧುವಿನ ವೇಷದಲ್ಲಿ ಬಂದಿದ್ದವನು ಅವನೇ. ಅಕ್ಬರನಿಗೆ ಸಂತೋಷವಾಯಿತು. “ನಿನ್ನ ಉತ್ತರಗಳಿಂದಲೇ ನಿನ್ನನ್ನು ಬೀರಬಲ್ ಎಂದು ಗುರುತಿಸಿದ್ದೆ. ಅದಕ್ಕೆ ಈ ಪ್ರಶ್ನೆ ಹಾಕಿದೆ. ಇನ್ನೆಂದೂ ನನ್ನ ಬಿಟ್ಟು ಹೋಗಬೇಡ” ಎಂದು ಮಿತ್ರನನ್ನು ಆತ್ಮೀಯತೆಯಿಂದ ಅಪ್ಪಿಕೊಂಡನು.

ಗೆಳೆತನವೆ ಇಹಲೋಕಕ್ಕಿರುವ ಅಮೃತ. ಗೆಳೆತನವೆ ಚಿರಬಾಳ ಸಂಜೀವಿನಿ.

* * * * * *

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅವಿನಾಶಿ** – ನಾಶವಿಲ್ಲದ್ದು
**ಆಜ್ಞೆ** – ಅಪ್ಪಣೆ
**ಕೌಶಲ** – ಜಾಣತನ
**ತೇಜಸ್ವಿ** – ತೇಜಸ್ಸುಳ್ಳವ; ಕಾಂತಿಯುಳ್ಳವ.
**ದ್ವಾರ** – ಬಾಗಿಲು
**ಮಿತ್ರ** – ಸ್ನೇಹಿತ; ಗೆಳೆಯ.
**ಸಮಾಗಮ** – ಸೇರುವುದು
**ಅಸಮಾಧಾನ** – ಬೇಸರ; ಅತೃಪ್ತಿ.
**ಆಲಂಗಿಸು** – ಅಪ್ಪಿಕೊಳ್ಳು
**ತವಕ** – ಆತುರ; ಕಾತರ.
**ದರ್ಬಾರು** – ರಾಜಾಸ್ಥಾನ; ಅಧಿಕಾರ ನಡೆಸುವಿಕೆ.
**ಮಾರುತ** – ಗಾಳಿ
**ರಾಜ್ಯಭಾರ** – ರಾಜ್ಯದ ಹೊಣೆಗಾರಿಕೆ; ಆಳ್ವಿಕೆ.
**ಸ್ವಾರ್ಥ** – ಸ್ವಹಿತ; ಸ್ವಪ್ರಯೋಜನ.

### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಅಕ್ಬರ್ ಮತ್ತು ಬೀರಬಲ್ ಇವರ ನಡುವಿನ ಸಂಬಂಧ ಯಾವ ರೀತಿಯದು?
೨. ಅಕ್ಬರ್ ಬೀರಬಲ್ಲನನ್ನು ಏಕೆ ಹುಡುಕಾಡಿಸಿದನು?
೩. ಅರಮನೆಯನ್ನು ಪ್ರವೇಶಿಸಿದ ಸಾಧು ಹೇಗಿದ್ದನು?
೪. ಅಕ್ಬರನ ಆಸ್ಥಾನದಲ್ಲಿದ್ದ ವಿದ್ವಾಂಸರುಗಳ ಹೆಸರುಗಳೇನು?
೫. ವಿಶ್ವದಲ್ಲಿ ಅತ್ಯುತ್ತಮವಾದ ವಸ್ತು ಯಾವುದು?
೬. ಕಳೆದು ಹೋದವುಗಳನ್ನು ಮತ್ತೆ ಪಡೆಯಲು ಸಾಧ್ಯವಾಗದೇ ಇರುವವು ಯಾವುವು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬೀರಬಲ್ ಅಕ್ಬರನಿಗೆ ಕಾಣದಂತೆ ಏಕೆ ಮರೆಯಾಗಿದ್ದನು?
೨. ಸೇವಕನು ಸಾಧುವಿನ ಬಗ್ಗೆ ಅಕ್ಬರನಲ್ಲಿಗೆ ಬಂದು ಏನೆಂದು ಹೇಳಿದನು?
೩. ಅರಮನೆಯನ್ನು ಪ್ರವೇಶಿಸಿದ ಸಾಧುವಿಗೆ ಅಕ್ಬರ್ ಏನೆಂದು ಹೇಳಿದನು?
೪. ಮಾನ್‌ಸಿಂಗ್‌ನ ಪ್ರಶ್ನೆಗಳಿಗೆ ಸಾಧುವಿನ ಉತ್ತರಗಳೇನು?
೫. ಸಾಧುವಿನ ಉತ್ತರಗಳಿಂದ ಸಂತಸಪಟ್ಟ ಅಕ್ಬರ್ ಏನು ಹೇಳಿದನು?
೬. ಅಕ್ಬರನಿಗೆ ಸಾಧು ತನ್ನ ನಿಜರೂಪವನ್ನು ಹೇಗೆ ತೋರಿಸಿದನು?

**ಇ) ಕೆಳಗಿನ ಪ್ರಶ್ನೆಗೆ ಏಳು–ಎಂಟು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅಕ್ಬರನ ಆಸ್ಥಾನದಲ್ಲಿದ್ದ ವಿದ್ವಾಂಸರು ಹಾಗೂ ಸಾಧುವಿನ ನಡುವೆ ನಡೆದ ಸಂಭಾಷಣೆ ಏನು?

**ಈ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು ತಿಳಿಸಿ.**

೧. "ಎಂಥ ಕೆಲಸ ಆಗಿಹೋಯಿತು."
೨. "ಕಳೆದು ಹೋದದ್ದನ್ನು ಮತ್ತೆ ಪಡೆಯಲಾಗದ್ದು ಯಾವುದು?"
೩. "ನನ್ನ ಮಂತ್ರಿ ಬೀರಬಲ್ ಕಾಣೆಯಾಗಿದ್ದಾನೆ."

**ಉ) ಆವರಣದಲ್ಲಿ ಕೊಟ್ಟಿರುವ ಪದಗಳಲ್ಲಿ ಸೂಕ್ತವಾದುದನ್ನು ಆಯ್ದು ಖಾಲಿ ಬಿಟ್ಟಿರುವ ಸ್ಥಾನದಲ್ಲಿ ಭರ್ತಿಮಾಡಿರಿ.**

೧. ಅಕ್ಬರನಿಗೆ ____________ ಮೇಲೆ ಅಸಮಾಧಾನ ಉಂಟಾಯಿತು.
ಅ) ಮಾನ್ ಸಿಂಗ್ ಆ) ತೋದರ ಮಲ್ಲ
ಇ) ತಾನ್ ಸೇನ್ ಈ) ಬೀರಬಲ್

೨. ಬೀರಬಲ್ಲನು ಅಕ್ಬರನ ಆಸ್ಥಾನಕ್ಕೆ ___________ ವೇಷದಲ್ಲಿ ಬಂದಿದ್ದನು.
ಅ) ಮಂತ್ರಿ ಆ) ಸಾಧು
ಇ) ವಿದ್ವಾಂಸ ಈ) ವ್ಯಾಪಾರಿ

೩. ಮಾರುತಕ್ಕಿಂತ ವೇಗವಾದುದು ______________
ಅ) ಜ್ಞಾನ ಆ) ಧೈರ್ಯ
ಇ) ಕಲ್ಪನೆ ಈ) ಸ್ವಾರ್ಥ

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

| | | | |
|---|---|---|---|
| ೧. ಅಸಮಾಧಾನ | x ____________ | ೨. ಮಿತ್ರ | x ____________ |
| ೩. ಸೇವಕ | x ____________ | ೪. ಬುದ್ಧಿವಂತ | x ____________ |
| ೫. ಜ್ಞಾನ | x ____________ | ೬. ಸಿಹಿ | x ____________ |
| ೭. ನಗು | x ____________ | ೮. ಸ್ವಾರ್ಥ | x ____________ |

ಆ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ತವಕ :______________________

೨. ಮೇಧಾವಿ :______________________

೩. ತೇಜಸ್ವಿ :______________________

೪. ಉಡುಗೊರೆ:______________________

೫. ಜ್ಞಾನ :______________________

ಇ) ಇಲ್ಲಿರುವ ಪದಗಳನ್ನು ಬಿಡಿಸಿ ಬರೆಯಿರಿ.

೧. ಅತ್ಯುತ್ತಮ = ________ + ________

೨. ಅವನೊಬ್ಬ = ________ + ________

೩. ಮುಖವನ್ನು = ________ + ________

೪. ಕಾಣೆಯಾಗು = ________ + ________



## IV. ಸೈದ್ಧಾಂತಿಕ ವ್ಯಾಕರಣ :

ಅ) ಲೇಖನ ಚಿಹ್ನೆಗಳು.

ಬರವಣಿಗೆಯಲ್ಲಿ ಲೇಖನ ಚಿಹ್ನೆಗಳು ಅತ್ಯಂತ ಮಹತ್ವವನ್ನು ಪಡೆಯುತ್ತವೆ. ಮಾತಿನಲ್ಲಿ ಧ್ವನಿಯ ಏರಿಳಿತಗಳ ಮೂಲಕ ನಮ್ಮ ಭಾವನೆಗಳನ್ನು ಸ್ಪಷ್ಟವಾಗಿ ತಿಳಿಸಬಹುದು. ಅದೇರೀತಿ ಲೇಖನ ಚಿಹ್ನೆಗಳ ಮೂಲಕ ಬರವಣಿಗೆಯಲ್ಲಿ ನಮ್ಮ ಭಾವನೆಗಳನ್ನು ಸ್ಪಷ್ಟವಾಗಿ ತಿಳಿಸಬಹುದಾಗಿದೆ. ಅವುಗಳನ್ನು ಅರಿತು ಬರವಣಿಗೆಯಲ್ಲಿ ಬಳಸುವುದನ್ನು ರೂಢಿಮಾಡಿಕೊಳ್ಳಬೇಕು.

೧. ಪೂರ್ಣವಿರಾಮ (.) – ಕ್ರಿಯೆಯಿಂದ ಪೂರ್ಣಗೊಂಡ ವಾಕ್ಯದ ಕೊನೆಯಲ್ಲಿ ಚಿಹ್ನೆಯನ್ನು ಬಳಸಬೇಕು.

೨. ಅರ್ಧವಿರಾಮ (;) – ಒಂದು ಪ್ರಧಾನ ವಾಕ್ಯಕ್ಕೆ ಅಧೀನವಾಗುವ ಉಪವಾಕ್ಯಗಳ ಕೊನೆಯಲ್ಲಿ ಅರ್ಧವಿರಾಮವನ್ನು ಬಳಸಲಾಗುತ್ತದೆ.

೩. ಅಲ್ಪವಿರಾಮ (,) – ಕರ್ತೃ, ಕರ್ಮ, ಕ್ರಿಯಾ ಪದಗಳಿಗೆ ಬೇರೆ ಬೇರೆ ವಿಶೇಷಣಗಳನ್ನು ನೀಡಿದಾಗ ಅಲ್ಪವಿರಾಮವನ್ನು ಬಳಸಲಾಗುತ್ತದೆ.

೪. ಪ್ರಶ್ನಾರ್ಥಕ (?) – ಪ್ರಶ್ನೆ ರೂಪದ ಪದ ಮತ್ತು ವಾಕ್ಯಗಳ ಮುಂದೆ ಬಳಸುವ ಚಿಹ್ನೆ ಇದಾಗಿದೆ.

೫. ಭಾವಸೂಚಕ (!) – ಅಚ್ಚರಿ, ಖೇದ, ಸಂತೋಷ, ವಿಷಾದ ಇತ್ಯಾದಿ ಭಾವಗಳನ್ನು ಸೂಚಿಸುವ ಸಂದರ್ಭಗಳಲ್ಲಿ ಭಾವಸೂಚಕ ಚಿಹ್ನೆ ಬಳಸಬೇಕು.

೬. ಉದ್ಧರಣ " " – ಒಬ್ಬರು ಹೇಳಿದ ಮಾತನ್ನು ಯಥಾವತ್ತಾಗಿ ಬರೆಯುವಾಗ ಈ ಚಿಹ್ನೆಯನ್ನು ಬಳಸಲಾಗುವುದು.

೭. ಆವರಣ ಚಿಹ್ನೆ ( ) – ಒಂದು ಪದವನ್ನೋ ವಾಕ್ಯವನ್ನೋ ಹೇಳಿ ಅದಕ್ಕೆ ಸಮನಾರ್ಥಕ ಪದವನ್ನೋ ವಾಕ್ಯವನ್ನೋ ಹೇಳುವಾಗ ಈ ಚಿಹ್ನೆಯನ್ನು ಬಳಸಲಾಗುತ್ತದೆ.

೮. ವಿವರಣ ಚಿಹ್ನೆ : – ಒಂದು ಅಭಿಪ್ರಾಯದ ವಿವರಣೆಯನ್ನು ನೀಡುವಾಗ ಈ ಚಿಹ್ನೆಯನ್ನು ಬಳಸಬೇಕು.

**ಆ) ಈ ಕೆಳಗಿನ ವಾಕ್ಯಗಳಿಗೆ ಲೇಖನ ಚಿಹ್ನೆಗಳನ್ನು ಬಳಸಿ ಬರೆಯಿರಿ.**

೧. ಕುವೆಂಪು ಬೇಂದ್ರೆ ಕಾರಂತ ಮಾಸ್ತಿ ವಿನಾಯಕ ಅನಂತಮೂರ್ತಿ ಕಾರ್ನಾಡ ಕಂಬಾರ ಕನ್ನಡದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು
೨. ಬಸವಣ್ಣನವರು ದಯವೇ ಧರ್ಮದ ಮೂಲ ಎಂದು ಹೇಳಿದರು
೩. ಪಂಪ ಯಾವ ಶತಮಾನದ ಕವಿ
೪. ಅಯ್ಯೊ ವಿಧಿ ಬರೆಹವನ್ನು ಯಾರೂ ಅಳಿಸಲಾರರು

**ಇ) ಈ ಕೆಳಗಿನ ವಾಕ್ಯಗಳನ್ನು ಪ್ರಶ್ನಾರ್ಥಕ ವಾಕ್ಯಗಳನ್ನಾಗಿ ಪರಿವರ್ತಿಸಿರಿ.**

೧. ಅಕ್ಬರನಿಗೆ ಬೀರಬಲ್ಲನ ಮೇಲೆ ಅಸಮಾಧಾನ ಉಂಟಾಯಿತು.
೨. ಅಕ್ಬರ್ ಬೀರಬಲ್ಲನಿಗಾಗಿ ಹುಡುಕಾಡಿಸಿದ.
೩. ಸಾಧುವಿನ ವೇಷದಲ್ಲಿ ಬಂದಿದ್ದವನು ಬೀರಬಲ್ಲನೇ ಆಗಿದ್ದ.

## V. ಚಟುವಟಿಕೆಗಳು :

೧. ಕರ್ಣ–ದುರ್ಯೋಧನ, ಕೃಷ್ಣ–ಕುಚೇಲ ಮೊದಲಾದವರ ಕಥೆಗಳನ್ನು ಓದಿ ಆತ್ಮೀಯ ಸ್ನೇಹದ ಮಹತ್ವವನ್ನು ತಿಳಿಯಿರಿ.
೨. ಚೆನ್ನವೀರ ಕಣವಿ ಅವರ 'ಗೆಳೆತನ' ಪದ್ಯವನ್ನು ಓದಿರಿ.
೩. ಗೆಳೆತನದ ಮಹತ್ವ ಸಾರುವ ಹೇಳಿಕೆಗಳನ್ನು ಸಂಗ್ರಹಿಸಿರಿ.
೪. ಗೆಳೆತನದ ಲಕ್ಷಣಗಳನ್ನು ಪಟ್ಟಿಮಾಡಿರಿ.

* * * * * *

ಪಾಠ – ೭




# ನಸಿರುದ್ದೀನನ ಕತೆಗಳು

– ಪ್ರಕಾಶ ಕಂಬತ್ತಳ್ಳಿ

**ಪಾಠ ಪ್ರವೇಶ :** ಮಕ್ಕಳೇ ನೀವು ತೆನಾಲಿರಾಮನ ಹಾಗೂ ಬೀರಬಲ್ಲನ ಕತೆಗಳನ್ನು ಕೇಳಿದ್ದೀರಿ. ಅವರಂತೆ ನಸಿರುದ್ದೀನನ ಕತೆಗಳೂ ತುಂಬಾ ಪ್ರಸಿದ್ಧವಾಗಿವೆ. ನಸಿರುದ್ದೀನನದು ವರ್ಣರಂಜಿತ ವ್ಯಕ್ತಿತ್ವ. ಈತನ ಕತೆಗಳಲ್ಲಿ ಬಹುಮಟ್ಟಿಗೆ ಪ್ರಧಾನ ಪಾತ್ರಧಾರಿ ಆತನೇ. ಈತನ ಕತೆಗಳು ಗಾತ್ರದಲ್ಲಿ ಚಿಕ್ಕವು. ಒಂದು ಪುಟವನ್ನೂ ಮೀರುವುದಿಲ್ಲ. ನಸಿರುದ್ದೀನನಿಗೆ ಕತ್ತೆಯನ್ನು ಕಂಡರೆ ಬಹಳ ಪ್ರೀತಿ ಇದ್ದಂತೆ ಕಾಣುತ್ತದೆ. ಅವನ ಬಹುತೇಕ ಕತೆಗಳಲ್ಲಿ ಕತ್ತೆ ಒಂದು ಪ್ರಧಾನ ಪಾತ್ರವಾಗಿ ಕಂಡುಬರುತ್ತದೆ. ಈ ಎಲ್ಲಾ ಕತೆಗಳು ನಸಿರುದ್ದೀನನ ಜೀವನದಲ್ಲಿ ನಿಜವಾಗಿಯೂ ನಡೆದವುಗಳೇ ಎಂಬುದರ ಬಗ್ಗೆ ತಲೆ ಕೆಡಿಸಿಕೊಳ್ಳದೆ, ಕತೆಗಳನ್ನು ಓದಿ ಅವುಗಳ ಸ್ವಾರಸ್ಯವನ್ನು ಸವಿಯುವುದಷ್ಟೇ ಮುಖ್ಯ. ಇಲ್ಲಿ ನಸಿರುದ್ದೀನನ ನಾಲ್ಕು ಕತೆಗಳನ್ನು ನೀಡಿದೆ. ಓದಿ ಆನಂದಿಸಿರಿ.

## ೧. ಕತ್ತೆಯ ಮಾತು

ನಸಿರುದ್ದೀನನ ಬಳಿ ಒಂದು ಸುಂದರವಾದ ಕತ್ತೆ ಇತ್ತು. ಅವನು ಅದನ್ನು ಯಾರಿಗೂ ಕೊಡಲು ಇಷ್ಟಪಡುತ್ತಿರಲಿಲ್ಲ. ಆದರೂ ಒಂದು ದಿನ ನೆರೆಯವ ಕೇಳಿದ.

"ಕೆಲವು ಸಾಮಾನು ಸಾಗಿಸಬೇಕಾಗಿದೆ, ನಿನ್ನ ಕತ್ತೆ ಕೊಡುವೆಯಾ?"

"ಇಲ್ಲ ಮಿತ್ರ, ಈಗ ನನ್ನ ಬಳಿ ಯಾವ ಕತ್ತೆಯೂ ಇಲ್ಲ" ಎಂದ ನಸಿರುದ್ದೀನ್.

ಪರಿಪರಿಯಾಗಿ ಕೇಳಿಕೊಂಡರು ನಸಿರುದ್ದೀನ್ ತನ್ನ ಬಳಿ ಕತ್ತೆ ಇಲ್ಲಾ ಎಂದೇ ವಾದಿಸಿದ. ಮಿತ್ರ ಇನ್ನೇನು ಹೊರಡಬೇಕು, ಅಷ್ಟರಲ್ಲಿ ಮನೆಯಲ್ಲಿದ್ದ ಕತ್ತೆ ಜೋರಾಗಿ ಅರಚಿಕೊಂಡಿತು.



ನೆರೆಮನೆಯಾತ "ಏನು ದೊಡ್ಡಮನುಷ್ಯರೇ, ಕತ್ತೆ ನಾನಿಲ್ಲಿದ್ದೇನೆ ಅಂತ ಕೂಗಿ ಹೇಳುತ್ತಿದೆಯಲ್ಲಾ" ಎಂದ ವ್ಯಂಗ್ಯವಾಗಿ.

ನಸಿರುದ್ದೀನನಿಗೆ ಕೋಪ ಉಕ್ಕಿ ಬಂತು. "ಅಲ್ಲಯ್ಯ ಇಷ್ಟು ದೊಡ್ಡಮನುಷ್ಯ, ನಾನು ಹೇಳುವ ಮಾತಿಗಿಂತ ಕತ್ತೆಯ ಮಾತಿನಲ್ಲಿ ನಂಬಿಕೆ ಹೆಚ್ಚೋ" ಎಂದು ಕೇಳಿದ.

* * *

## ೨. ವಯಸ್ಸು

ಒಂದು ದಿನ ಗೆಳೆಯರ ಗುಂಪಿನಲ್ಲಿ ನಸಿರುದ್ದೀನ್ ಹರಟೆಹೊಡೆಯುತ್ತಿದ್ದ. ಮಾತಿನ ಮಧ್ಯೆ ಸ್ನೇಹಿತನೊಬ್ಬ "ನಸಿರುದ್ದೀನ್ ನಿನ್ನ ವಯಸ್ಸೆಷ್ಟು?" ಎಂದು ಕೇಳಿದ.

ನಸಿರುದ್ದೀನ್ ಕೂಡಲೇ "ನಲವತ್ತು ವರ್ಷ" ಎಂದ.

ಆದರೆ ಅವನ ಸುಕ್ಕುಗಟ್ಟಿದ ಮುಖ, ಬಿಳಿಯ ಕೂದಲು ನೋಡಿದರೆ ನಲವತ್ತು ವಯಸ್ಸಿನವನಂತೆ ಕಾಣುತ್ತಿರಲಿಲ್ಲ. ಆದ್ದರಿಂದ ಸ್ನೇಹಿತರು ಅವನ ಮಾತನ್ನು ನಂಬಲಿಲ್ಲ. ಅವರಲ್ಲಿ ಒಬ್ಬ ಧೈರ್ಯ ಮಾಡಿ ಕೇಳಿದ.

"ಅಲ್ಲಾ ನಸಿರುದ್ದೀನ್, ಹತ್ತು ವರ್ಷದ ಹಿಂದೆಯು ನೀನು ಇದೇ ಮಾತು ಹೇಳಿದ್ದು ನನಗೆ ಚೆನ್ನಾಗಿ ನೆನಪಿದೆ. ಈಗಲೂ ನಲವತ್ತು ವರ್ಷ ಎಂದೇ ಹೇಳುವೆಯಲ್ಲಾ?"

"ನಾನು ಆಗೊಂದು ಈಗೊಂದು ಮಾತನಾಡುವವನಲ್ಲಾ. ನನ್ನದು ಯಾವಾಗಲೂ ಒಂದೇ ಮಾತು ಎಂದ ನಸಿರುದ್ದೀನ."

* * *

## ೩. ಕಳ್ಳರು ಬಂದರು ನಸಿರುದ್ದೀನನ ಮನೆಗೆ

ಒಂದು ರಾತ್ರಿ ನಾಲ್ಕೈದು ಮಂದಿ ಕಳ್ಳರು ನಸಿರುದ್ದೀನನ ಮನೆಗೆ ನುಗ್ಗಿದರು. ದೂರದಿಂದಲೇ ಇದನ್ನು ಗಮನಿಸಿದ ನಸಿರುದ್ದೀನ್ ಬೀರು ಒಂದರಲ್ಲಿ ನುಗ್ಗಿ ಬಾಗಿಲು ಹಾಕಿಕೊಂಡ.

ಕಳ್ಳರು ಮನೆಯನ್ನೆಲ್ಲಾ ಜಾಲಾಡಿದರು. ಏನೂ ಸಿಗಲಿಲ್ಲ. ಆದರೂ ಕಳ್ಳರು ಬಿಡಲಿಲ್ಲ. ಏನಾದರೂ ಸಿಗಬಹುದೆಂದು ಪುನಃ ಮನೆಯನ್ನೆಲ್ಲಾ ಹುಡುಕಿದರು. ಒಬ್ಬ ಕಳ್ಳನಿಗೆ ಬೀರು ಕಣ್ಣಿಗೆ ಬಿತ್ತು. ಖುಷಿಯಾಯಿತು. ಸದ್ಯ ಬೀರುವಿನಲ್ಲಿ ಏನಾದರೂ ಸಿಕ್ಕೇ ಸಿಗುತ್ತದೆ ಎಂದು ಬೀರು ಬಾಗಿಲು ತೆರೆದ. ಅಲ್ಲಿ ನಸಿರುದ್ದೀನ ಮುದುಡಿ ಕುಳಿತಿದ್ದ.

"ಅರೇ! ಇಲ್ಲೇನು ಮಾಡುತ್ತಿದ್ದೀಯಾ?" ಕಳ್ಳ ಕೇಳಿದ.



"ನಿಮಗೆ ನಮ್ಮ ಮನೆಯಲ್ಲಿ ಕದ್ದೊಯ್ಯಲು ಏನೂ ಸಿಗಲಿಲ್ಲವಲ್ಲಾ ; ಅದಕ್ಕೆ ನಾಚಿಕೆಯಾಗಿ ನಿಮಗೆ ಮುಖ ತೋರಿಸಲಾರದೆ ಇಲ್ಲಿ ಬಚ್ಚಿಟ್ಟುಕೊಂಡಿದ್ದೇನೆ ಎಂದ.

* * *

## ೪. ಕತ್ತೆಗೆಷ್ಟು ಬೆಲೆ?

ನಸಿರುದ್ದೀನನ ಕತ್ತೆ ಬರಬರುತ್ತಾ ತೀರಾ ಸೋಮಾರಿಯಾಗತೊಡಗಿತು. ಏನುಮಾಡಿದರೂ ಬದಲಾಗಲಿಲ್ಲ. ಬೇಸತ್ತ ನಸಿರುದ್ದೀನ ಆ ಕತ್ತೆಯನ್ನು ಸಂತೆಗೆ ತೆಗೆದುಕೊಂಡು ಹೋಗಿ ೪೦ ನಾಣ್ಯಗಳಿಗೆ ಮಾರಾಟ ಮಾಡಿದ.

ಕತ್ತೆಯನ್ನು ಕೊಂಡವನು ಆ ಕತ್ತೆಯನ್ನು ಇದೇ ಸಂತೆಯಲ್ಲಿ ಮಾರಾಟ ಮಾಡಿಬಿಡಬೇಕೆಂದು ನಿರ್ಧರಿಸಿದ. ಅವನೂ ಅಲ್ಲಿಯೇ ಹರಾಜು ಹಾಕತೊಡಗಿದ.

ಕತ್ತೆಯ ಒಂದೊಂದೇ ಗುಣಗಳನ್ನು ವರ್ಣಿಸತೊಡಗಿದ. ನೆರೆದಿದ್ದವನೊಬ್ಬ ೫೦ ನಾಣ್ಯಕ್ಕೆ ಕೂಗಿದ.

ಕತ್ತೆ ಕೆಲಸ ಮಾಡುವ ರೀತಿ, ಅದರ ಸಾಮರ್ಥ್ಯ ಇತ್ಯಾದಿಗಳನ್ನು ಹೊಗಳತೊಡಗಿದ.

ಮತ್ತೊಬ್ಬ ೬೦ ನಾಣ್ಯಗಳಿಗೆ ಕೂಗಿದ.



ಕತ್ತೆಯ ಪರಂಪರೆ, ಅದರ ವಂಶಾವಳಿ, ಮುಂದೆ ಇದು ಹಾಕುವ ಮರಿಗಳು ಇತ್ಯಾದಿ ಕತ್ತೆಯ ಗುಣಗಾನ ಮಾಡತೊಡಗಿದ. ಇದನ್ನೆಲ್ಲಾ ನೋಡುತ್ತಾ ನಿಂತಿದ್ದ ನಸಿರುದ್ದೀನನಿಗೆ, ತನ್ನ ಕತ್ತೆ ಇಷ್ಟೆಲ್ಲಾ ಗುಣಗಳನ್ನು ಹೊಂದಿದೆಯೇ ಎಂದು ಆಶ್ಚರ್ಯವಾಯಿತು. ಬೇರಿನ್ನಾರಾದರೂ ಕೊಂಡುಕೊಂಡಾರೆಂಬ ಆತಂಕದಿಂದ ತಾನೇ ೨೦ ನಾಣ್ಯಗಳಿಗೆ ಹರಾಜು ಕೂಗಿದ. ಅದೇ ಕತ್ತೆಯನ್ನು ಹೊಡೆದುಕೊಂಡು ಮನೆಗೆ ಬಂದ.

* * *

## ಕೃತಿಕಾರರ ಪರಿಚಯ :



**ಪ್ರಕಾಶ ಕಂಬತ್ತಳ್ಳಿ** ಅವರು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಕಂಬತ್ತಳ್ಳಿ ಗ್ರಾಮದಲ್ಲಿ ೧೯೫೪ ರಲ್ಲಿ ಜನಿಸಿದರು. ನಾಟಕ ಶಾಸ್ತ್ರದಲ್ಲಿ ಬಿ.ಎ. ಹಾಗೂ ಕನ್ನಡದಲ್ಲಿ ಎಂ.ಎ. ಪದವಿ ಪಡೆದಿದ್ದಾರೆ. ಇವರು ಭಾಷಾಂತರಕಾರರಾಗಿ, ಕಥೆಗಾರರಾಗಿ ಹಾಗೂ ವಿವಿಧ ಪ್ರಕಾಶನ ಸಂಸ್ಥೆಗಳಲ್ಲಿ ಸಂಪಾದಕರಾಗಿ ದುಡಿದಿದ್ದಾರೆ. ಇವರು ೧೯೯೫ ರಲ್ಲಿ ಬೆಂಗಳೂರಿನಲ್ಲಿ 'ಅಂಕಿತ ಪುಸ್ತಕ ಪ್ರಕಾಶನ' ಸಂಸ್ಥೆಯನ್ನು ಸ್ಥಾಪಿಸಿ, ಹೊಸ ಕಥೆಗಾರರಿಗೆ ಮತ್ತು ಲೇಖಕರಿಗೆ ಪ್ರೋತ್ಸಾಹ ನೀಡುತ್ತಿದ್ದಾರೆ.

ಇವರು 'ಆರದಿರಲಿ ಬೆಳಕು', 'ರಂಗವಿಹಾರ', 'ಮನಸ್ಸಿಗೆಷ್ಟು ಮುಖಗಳು', 'ಕಂಪ್ಯೂಟರ್ ಸೇವಕ ಮತ್ತು ಇತರ ನಾಟಕಗಳು', 'ಅನ್ವೇಷಕರು' ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಇವರಿಗೆ ಎಸ್.ವಿ. ಪರಮೇಶ್ವರಭಟ್ಟ ಸಂಸ್ಮರಣಾ ಪ್ರಶಸ್ತಿ ಹಾಗೂ ಕನ್ನಡ ಪುಸ್ತಕ ಪ್ರಾಧಿಕಾರದ ಅತ್ಯುತ್ತಮ ಪ್ರಕಾಶನ ಸಂಸ್ಥೆ ಪ್ರಶಸ್ತಿ ಲಭಿಸಿವೆ. ಪ್ರಸ್ತುತ ಕಥೆಗಳನ್ನು ಇವರ 'ಮಕ್ಕಳಿಗಾಗಿ ಮತ್ತೆ ಹೇಳಿದ ನಸಿರುದ್ದೀನನ ಕತೆಗಳು' ಪುಸ್ತಕದಿಂದ ಆರಿಸಲಾಗಿದೆ.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಖುಷಿ** – ಸಂತೋಷ; ಆನಂದ.

**ನೆರೆಯವ** – ಸಮೀಪದವ; ಅಕ್ಕಪಕ್ಕದವನು.

**ಪರಿಪರಿಯಾಗಿ** – ನಾನಾ ವಿಧದಲ್ಲಿ

**ವಂಶಾವಳಿ** – ಪೀಳಿಗೆ

**ಸೋಮಾರಿ** – ಮೈಗಳ್ಳತನ; ಆಲಸ್ಯ.

**ಜಾಲಾಡು** – ಶೋಧಿಸು; ಹುಡುಕು.

**ಪರಂಪರೆ** – ಕುಲ; ವಂಶ.

**ಬೀರು** – ಕಪಾಟು

**ಸಂತೆ** – ವಸ್ತುಗಳನ್ನು ಕೊಡುಕೊಳ್ಳುವುದಕ್ಕಾಗಿ ಸೇರುವ ಜನರ ಗುಂಪು.

**ಹರಟೆ** – ಕೆಲಸಕ್ಕೆ ಬಾರದ ಮಾತು.

### II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನೆರೆಯವನು ನಸಿರುದ್ದೀನನ ಕತ್ತೆಯನ್ನು ಏಕೆ ಬೇಕೆಂದು ಕೇಳಿದನು?

೨. ಕತ್ತೆ ಅರಚುವುದನ್ನು ಕೇಳಿದ ನೆರೆಯವನು ನಸಿರುದ್ದೀನನಿಗೆ ಏನೆಂದು ಹೇಳಿದನು?

೩. ನಸಿರುದ್ದೀನನು ತನಗೆ ಎಷ್ಟು ವಯಸ್ಸಾಗಿದೆ ಎಂದನು?

೪. ನಸಿರುದ್ದೀನನ ವಯಸ್ಸಿನ ಬಗೆಗೆ ಆತನ ಸ್ನೇಹಿತರಿಗೆ ಅನುಮಾನ ಏಕೆ ಬಂತು?

೫. ನಸಿರುದ್ದೀನನು ಬೀರುವಿನಲ್ಲಿ ಬಚ್ಚಿಟ್ಟುಕೊಂಡದ್ದು ಏಕೆಂದು ಕಳ್ಳನಿಗೆ ಹೇಳಿದನು?

೬. ನಸಿರುದ್ದೀನನು ತನ್ನ ಕತ್ತೆಯನ್ನು ಏಕೆ ಮಾರಿದನು?

೭. ನಸಿರುದ್ದೀನನು ತನ್ನ ಕತ್ತೆಯನ್ನು ತಾನೇ ಕೊಂಡದ್ದು ಏಕೆ?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ನಸಿರುದ್ದೀನನು ನೆರೆಯವನಿಗೆ ಕತ್ತೆ ಕೊಡಲು ನಿರಾಕರಿಸಿದ ಪ್ರಸಂಗವನ್ನು ವಿವರಿಸಿ.

೨. ನಸಿರುದ್ದೀನನು ತನ್ನ ವಯಸ್ಸಿನ ಬಗೆಗೆ ಏನೆಂದು ಸಮರ್ಥನೆ ನೀಡಿದನು?

೩. ಕಳ್ಳರು ನಸಿರುದ್ದೀನನ ಮನೆಗೆ ನುಗ್ಗಿದ ಪ್ರಸಂಗವನ್ನು ವಿವರಿಸಿ.

೪. ಕತ್ತೆಯನ್ನು ಕೊಂಡವನು ಕತ್ತೆಯನ್ನು ಏನೆಂದು ಗುಣಗಾನ ಮಾಡಿದನು?

೫. ನಸಿರುದ್ದೀನನು ತನ್ನ ಕತ್ತೆಯನ್ನು ತಾನೇ ಕೊಂಡುಕೊಂಡ ಪ್ರಸಂಗ ಯಾವುದು?

ಇ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು?

೧. "ಇಲ್ಲ ಮಿತ್ರ, ಈಗ ನನ್ನ ಬಳಿ ಯಾವ ಕತ್ತೆಯೂ ಇಲ್ಲ."

೨. "ನಾನು ಆಗೊಂದು ಈಗೊಂದು ಮಾತನಾಡುವವನಲ್ಲ."

೩. "ಅರೇ! ಇಲ್ಲೇನು ಮಾಡುತ್ತಿದ್ದೀಯಾ?"

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಆತಂಕ x ________ ೨. ರಾತ್ರಿ x ________

೩. ದೂರ x ________ ೪. ಮಿತ್ರ x ________

೫. ಧೈರ್ಯ x ________ ೬. ಸುಂದರ x ________

೭. ನಂಬಿಕೆ x ________ ೮. ಹೊಗಳು x ________

ಆ) ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಆತಂಕ :________________

೨. ನೆರೆಯವ :________________

೩. ಖುಷಿ :________________

೪. ನಾಚಿಕೆ :________________

೫. ಜಾಲಾಡು :________________

ಇ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

೧. ವಯಸ್ಸೆಷ್ಟು = ________ + ________

೨. ಆಗೊಂದು = ________ + ________

೩. ನಾನಿಲ್ಲಿದ್ದೇನೆ = ________ + ________

೪. ನಾಲ್ಕೈದು = ____________ + ____________

೫. ಕದ್ದೊಯ್ಯಲು = ____________ + ____________

**ಈ) ಕೆಳಗಿನ ಪದಗಳಿಗೆ ಸಮನಾರ್ಥಕ ಪದಗಳನ್ನು ಬರೆಯಿರಿ.**

೧. ಖುಷಿ –

೨. ಸ್ನೇಹಿತ –

೩. ಆತಂಕ –

**ಉ) ಕೆಳಗಿನ ವಾಕ್ಯಗಳಲ್ಲಿರುವ ಪದಗಳನ್ನು ಅರ್ಥಪೂರ್ಣವಾಗಿ ಜೋಡಿಸಿ ಬರೆಯಿರಿ.**

೧. ನಂಬಲಿಲ್ಲ ಅವನ ಸ್ನೇಹಿತರು ಮಾತನ್ನು.

೨. ಕೂಗಿ ಅಂತ ನಾನಿಲ್ಲಿದ್ದೇನೆ ಹೇಳುತ್ತಿದೆಯಲ್ಲಾ ಕತ್ತೆ.

೩. ಮಂದಿ ನಾಲ್ಕೈದು ಮನೆಗೆ ನಸಿರುದ್ದೀನನ ಕಳ್ಳರು ನುಗ್ಗಿದರು.

೪. ತೀರಾ ಕತ್ತೆ ನಸಿರುದ್ದೀನನ ಬರಬರುತ್ತಾ ಸೋಮಾರಿಯಾಗತೊಡಗಿತು.

## IV. ಚಟುವಟಿಕೆಗಳು :

೧. ನಸಿರುದ್ದೀನನ ಇನ್ನಿತರ ಕತೆಗಳನ್ನು ಓದಿರಿ.

೨. ಇಲ್ಲಿರುವ ಕತೆಗಳನ್ನು ನಿಮ್ಮದೇ ದಾಟಿಯಲ್ಲಿ ಇತರರಿಗೆ ಹೇಳಿ ಸಂತೋಷ ಹಂಚಿಕೊಳ್ಳಿರಿ.

೩. ನಿಮ್ಮ ಅನುಭವಕ್ಕೆ ಬಂದ ಹಾಸ್ಯಮಯ ಪ್ರಸಂಗಗಳನ್ನು ಬರೆದು ಶಿಕ್ಷಕರ ಮಾರ್ಗದರ್ಶನ ಪಡೆಯಿರಿ.

* * * * *

ಪಾಠ – ೮




# ಶ್ರಾವಣ ಬಂತು ಕಾಡಿಗೆ

– ದ. ರಾ. ಬೇಂದ್ರೆ

**ಪಾಠ ಪ್ರವೇಶ :** ಮನುಷ್ಯ ಪ್ರಕೃತಿಯ ಕೂಸು. ಆದರೆ ಆಧುನಿಕ ಧಾವಂತದ ಬದುಕಿನ ಅವಸರದಲ್ಲಿ ಪ್ರಕೃತಿಯ ಸಹಜ ವಿದ್ಯಮಾನಗಳಿಂದ ದೂರ ಸರಿಯುತ್ತ ಯಾಂತ್ರಿಕ ಬದುಕಿನತ್ತ ವಾಲಿಕೊಂಡಿದ್ದಾನೆ. ವಿವಿಧ ಋತುಮಾನಗಳಲ್ಲಿ ಪ್ರಕೃತಿ ಪಡೆಯುವ ಸೌಂದರ್ಯ, ರೌದ್ರತೆ, ಅದು ನೀಡುವ ಆನಂದ, ತರುವ ಸಂಭ್ರಮವನ್ನು ಅನೇಕ ಕವಿಗಳು ವರ್ಣಿಸಿದ್ದಾರೆ. ಮಳೆಗಾಲದೊಂದಿಗೆ ಆಗಮಿಸುವ ಶ್ರಾವಣ ಮಾಸದಲ್ಲಿ ಭೂಮಿ, ಆಕಾಶ, ಮನೆ, ಮನಸ್ಸುಗಳ ಮೇಲೆ ಪ್ರಕೃತಿ ಮಾಡುವ ಮಾಂತ್ರಿಕ ಪರಿಣಾಮವನ್ನು ಬೇಂದ್ರೆಯವರು ಈ ಪದ್ಯದಲ್ಲಿ ಸೊಗಸಾಗಿ ವರ್ಣಿಸಿದ್ದಾರೆ.

ಶ್ರಾವಣಾ ಬಂತು ಕಾಡಿಗೆ । ಬಂತು ನಾಡಿಗೆ ।
ಬಂತು ಬೀಡಿಗೆ । ಶ್ರಾವಣಾ ಬಂತು ॥ ಪಲ್ಲವಿ ॥

ಕಡಲಿಗೆ ಬಂತು ಶ್ರಾವಣಾ । ಕುಣಿದ್ಹಾಂಗ ರಾವಣಾ ।
ಕುಣಿದಾವ ಗಾಳಿ । ಭೈರವನ ರೂಪತಾಳಿ ॥ ಅನುಪಲ್ಲವಿ ॥

ಶ್ರಾವಣಾ ಬಂತು ಘಟ್ಟಕ್ಕ । ರಾಜ್ಯಪಟ್ಟಕ್ಕ ।
ಬಾನಮಟ್ಟಕ್ಕ ।
ಏರ್‍ಯಾವ ಮುಗಿಲು । ರವಿ ಕಾಣೆ ಹಾಡೆಹಗಲು

ಶ್ರಾವಣಾ ಬಂತು ಹೊಳಿಗಳಿಗೆ । ಅದೇ ಶುಭಗಳಿಗೆ ।
ಹೊಳಿಗೆ ಮತ್ತ ಮಳಿಗೆ ।
ಆಗ್ಯೇದ ಲಗ್ನ । ಅದರಾಗ ಭೂಮಿ ಮಗ್ನ ॥

ಶ್ರಾವಣಾ ಬಂತು ಊರಿಗೆ । ಕೇರಿ ಕೇರಿಗೆ ।
ಹೊಡೆದ ಝೂರಿಗೆ ।
ಜೋಕಾಲಿ ಏರಿ । ಅಡರ್‍ಯಾವ ಮರಕ ಹಾರಿ ॥

ಶ್ರಾವಣಾ ಬಂತು ಮನಿಮನಿಗೆ । ಕೂಡಿ ದನಿದನಿಗೆ
ಮನದ ನನಿಕೊನಿಗೆ ।
ಒಡೆದಾವ ಹಾಡೂ । ರಸ ಉಕ್ಕತಾವ ನೋಡು ॥
ಶ್ರಾವಣಾ ಬಂತು.

* * * *

## ಕೃತಿಕಾರರ ಪರಿಚಯ :



**ದತ್ತಾತ್ರೇಯ ರಾಮಚಂದ್ರ ಬೇಂದ್ರೆ** ಅವರು ೩೧-೧-೧೮೯೬ ರಲ್ಲಿ ಧಾರವಾಡದಲ್ಲಿ ಜನಿಸಿದರು. 'ಅಂಬಿಕಾತನಯದತ್ತ' ಅವರ ಕಾವ್ಯನಾಮ. ಬೇಂದ್ರೆ ಅವರು ಧಾರವಾಡ, ಗದಗ, ಹುಬ್ಬಳ್ಳಿಗಳಲ್ಲಿ ಶಿಕ್ಷಕರಾಗಿ, ಆಕಾಶವಾಣಿಯ ಸಾಹಿತ್ಯ ಸಲಹೆಗಾರರಾಗಿ ಸೇವೆ ಸಲ್ಲಿಸಿದ್ದಾರೆ.

'ಗರಿ', 'ಗಂಗಾವತರಣ', 'ನಾದಲೀಲೆ', 'ಸಖೀಗೀತ', 'ಉಯ್ಯಾಲೆ', 'ಅರಳು ಮರಳು' ಇತ್ಯಾದಿ ಕವನ ಸಂಕಲನಗಳನ್ನು, 'ದೆವ್ವದ ಮನೆ', 'ನಗೆಹೊಗೆ' ಮೊದಲಾದ ನಾಟಕಗಳನ್ನು, 'ಸಾಹಿತ್ಯದ ವಿರಾಟ್ ಸ್ವರೂಪ', 'ಕಾವ್ಯೋದ್ಯೋಗ' ಮೊದಲಾದ ವಿಮರ್ಶಾ ಕೃತಿಗಳನ್ನು ಬರೆದಿದ್ದಾರೆ.

'ಜಯಕರ್ನಾಟಕ' 'ಜೀವನ' ಪತ್ರಿಕೆಗಳ ಸಂಪಾದಕರಾಗಿದ್ದು ಮರಾಠಿ ಭಾಷೆಯಲ್ಲೂ ಸಾಹಿತ್ಯವನ್ನು ರಚಿಸಿದ್ದಾರೆ. ಇವರು ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ, ವಾರಾಣಸಿ ಕಾಶಿ ವಿದ್ಯಾಪೀಠಗಳಿಂದ ಗೌರವ ಡಾಕ್ಟರೇಟ್, ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಮತ್ತು ಫೆಲೋಶಿಪ್, ಪದ್ಮಶ್ರೀ ಪ್ರಶಸ್ತಿ ಹಾಗೂ ನಾಕುತಂತಿ ಕವನ ಸಂಕಲನಕ್ಕೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಪಡೆದಿದ್ದಾರೆ. ಇವರು ೨೬-೧೦-೧೯೮೧ ರಲ್ಲಿ ನಿಧನರಾದರು. ಪ್ರಸ್ತುತ 'ಶ್ರಾವಣಾ ಬಂತು ಕಾಡಿಗೆ' ಕವನವನ್ನು ಅವರ 'ಹಾಡುಪಾಡು' ಕವನ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.



## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅಡರು** – ಮೇಲಕ್ಕೆ ಹತ್ತು
**ಕಡಲು** – ಸಮುದ್ರ
**ಕೇರಿ** – ಓಣಿ
**ಝೂರಿ** – ಜೋಕಾಲಿಯ ಜೀಕಾಟ
**ಪಟ್ಟ** – ಪಟ್ಟಾಭಿಷೇಕ
**ಬೀಡು** – ತಂಗುದಾಣ; ಮನೆ.
**ಮಗ್ನ** – ತನ್ಮಯ; ಏಕಾಗ್ರತೆಯಿಂದ ಕೂಡಿದ.
**ಲಗ್ನ** – ಮದುವೆ; ವಿವಾಹ.
**ಒಡೆ** – ಬಿರಿ; ಬಿಚ್ಚು.
**ಕಾಣೆ** – ಕಾಣದಿರುವುದು; ಅದೃಶ್ಯ.
**ಘಟ್ಟ** – ಬೆಟ್ಟಗಳ ಸಾಲು
**ನನೆಕೊನಿ** – ಮೊಗ್ಗಿನ ತುದಿ
**ಬಾನ** – ಆಕಾಶ
**ಮಳಿ** – ಮಳೆ
**ಮುಗಿಲು** – ಮೋಡ; ಮೇಘ.
**ಹೊಳಿ** – ಹೊಳೆ; ನದಿ.

**ಟಿಪ್ಪಣಿಗಳು :**

**ಶ್ರಾವಣ** – ಚಾಂದ್ರಮಾನದ ಐದನೆಯ ತಿಂಗಳು.
**ರಾವಣ** – ಲಂಕೆಯ ಒಬ್ಬ ದೊರೆ. ವಿಶ್ರವಸ ಎಂಬುವವನ ಮಗ.
**ಭೈರವ** – ಭೀಕರವಾದ, ಭಯಂಕರವಾದ, ಶಿವ.

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ದ. ರಾ. ಬೇಂದ್ರೆಯವರ ಅಂಕಿತನಾಮವೇನು?
೨. ಶ್ರಾವಣದ ಮಳೆಯನ್ನು ಬೇಂದ್ರೆಯವರು ಯಾರ ಕುಣಿತಕ್ಕೆ ಹೋಲಿಸಿದ್ದಾರೆ?
೩. ಶ್ರಾವಣದ ಬಿರುಗಾಳಿಯು ಯಾವ ರೂಪತಾಳಿದೆ ಎಂದು ಬೇಂದ್ರೆಯವರು ಹೇಳಿದ್ದಾರೆ?
೪. ಶ್ರಾವಣದ ಸಂದರ್ಭದಲ್ಲಿ ರವಿ ಕಾಣದಿರಲು ಕಾರಣವೇನು?
೫. ಶ್ರಾವಣದಲ್ಲಿನ ಹೊಳೆ ಮತ್ತು ಮಳೆಗಳ ಸಂಭ್ರಮವನ್ನು ಕವಿ ಏನೆಂದು ಬಣ್ಣಿಸಿದ್ದಾರೆ?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬೇಂದ್ರೆಯವರು ಶ್ರಾವಣ ಎಲ್ಲೆಲ್ಲಿಗೆ ಬಂತು ಎಂದು ಹೇಳಿದ್ದಾರೆ?
೨. ಶ್ರಾವಣದ ಕಡಲಿನ ರೌದ್ರತೆಯನ್ನು ಕವಿ ಬೇಂದ್ರೆಯವರು ಹೇಗೆ ವರ್ಣಿಸಿದ್ದಾರೆ?
೩. ಘಟ್ಟಕ್ಕೆ ಬಂದ ಶ್ರಾವಣ ಉಂಟುಮಾಡಿದ ಪರಿಣಾಮವೇನು?
೪. ಶ್ರಾವಣದಲ್ಲಿ ಕವಿಗೆ ಹೊಳೆ, ಮಳೆ ಹಾಗೂ ಭೂಮಿಗಳು ಹೇಗೆ ಕಾಣಿಸಿದವು?
೫. ಊರು-ಕೇರಿಗಳಲ್ಲಿ ಶ್ರಾವಣದ ಸಂಭ್ರಮ ಹೇಗೆ ಕಾಣುತ್ತದೆ?
೬. ಚಂದ್ರಮಾನ ಮಾಸಗಳ ಹೆಸರನ್ನು ಬರೆಯಿರಿ.

**ಇ) ಕೆಳಗಿನ ಪ್ರಶ್ನೆಗೆ ಏಳು-ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

೧. ಬೇಂದ್ರೆಯವರು ಶ್ರಾವಣದ ಪ್ರಾಕೃತಿಕ ಸೌಂದರ್ಯವನ್ನು ಯಾವ ರೀತಿ ವರ್ಣಿಸಿದ್ದಾರೆ?

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.**

| | | |
|---|---|---|
| **ಮಾದರಿ :** ಕುಣಿದ್ಹಾಂಗ | – | ಕುಣಿದ ಹಾಗೆ |
| ಬಂತು | – | |
| ಏರ್ಯಾವ | – | |
| ಅಡರ್ಯಾವ | – | |
| ಒಡೆದಾವ | – | |
| ಉಕ್ಕತಾವ | – | |
| ಅದರಾಗ | – | |
| ಮರಕ | – | |

ಆ) ಕೆಳಗಿನ ಪದಗಳಿಗೆ ಸಮನಾರ್ಥಕ ಪದಗಳನ್ನು ಬರೆಯಿರಿ.

೧. ಕಾಡು –
೨. ಕಡಲು –
೩. ಬಾನು –
೪. ರವಿ –
೫. ಮಳೆ –

ಇ) ಕೆಳಗಿನ ವಿಚಾರಗಳನ್ನು ಕೇಳಿ ತಿಳಿಯಿರಿ.

| ಚಾಂದ್ರಮಾನ ಮಾಸಗಳು | ಮತ್ತು | ಋತುಗಳು |
|---|---|---|
| ಚೈತ್ರ, ವೈಶಾಖ | = | ವಸಂತ ಋತು |
| ಜೇಷ್ಠ, ಆಷಾಢ | = | ಗ್ರೀಷ್ಮ ಋತು |
| ಶ್ರಾವಣ, ಭಾದ್ರಪದ | = | ವರ್ಷ ಋತು |
| ಆಶ್ವೀಜ, ಕಾರ್ತಿಕ | = | ಶರತ್ ಋತು |
| ಮಾರ್ಗಶಿರ, ಪುಷ್ಯ | = | ಹೇಮಂತ ಋತು |
| ಮಾಘ, ಫಾಲ್ಗುಣ | = | ಶಿಶಿರ ಋತು |



## IV. ಪೂರಕ ಓದು :

### ಭಾದ್ರಪದ ಸುಪ್ರಭಾತ

ದಿಗುತಟದಲಿ ತೆರೆಯುತಿತ್ತು ಹಗಲಿನಕ್ಷಿ
ಮುಗಿಲಗರಿಯ ಕಾಯಿಸಿತ್ತು ಗಗನಪಕ್ಷಿ
ಪಚ್ಚೆಯಾಗಿ ಮೆರೆಯುತಿತ್ತು ಭುವಿಯ ಮಣ್ಣು
ಪಸುರ ಸಿರಿಯ ಮೇಯುತಿತ್ತು ಕವಿಯ ಕಣ್ಣು
ಜೇನುತುಪ್ಪದಲ್ಲಿ ತೊಯ್ದ ಹಣ್ಣಿನಂತೆ
ಪೊಸಚೆಲ್ವಿನ ಬಲೆಯ ನೆಯ್ದ ಹೆಣ್ಣಿನಂತೆ
ಸವಿಗೆ ಸವಿಯ ಪೇರಿಸಿತ್ತು ಭದ್ರಮಾಸಂ
ಕವಿಗೆ ಕವಿಯ ತೋರಿಸಿತ್ತು ಸುಪ್ರಭಾತಂ

– ಕುವೆಂಪು

## V. ಚಟುವಟಿಕೆಗಳು :

೧. ಪ್ರಕೃತಿಗೆ ಸಂಬಂಧಿಸಿದ ಇನ್ನಿತರ ಕವಿತೆಗಳನ್ನು ಓದಿರಿ.

೨. 'ಶ್ರಾವಣ ಬಂತು ಕಾಡಿಗೆ' ಕವಿತೆಯ ಧ್ವನಿಸುರುಳಿಯನ್ನು ಕೇಳಿರಿ ಹಾಗೂ ನೀವೂ ರಾಗಬದ್ಧವಾಗಿ ಹಾಡುವುದನ್ನು ಕಲಿಯಿರಿ.

೩. ಈ ಕೆಳಗಿನ ಚಿತ್ರ ಸರಣಿಯನ್ನು ಗಮನಿಸಿ, ಸನ್ನಿವೇಶವನ್ನು ವಿವರಿಸಿರಿ.









ಪಾಠ – ೯

# ಕೊಳಲ ಜೋಗಿ

– ಪಂಜೆ ಮಂಗೇಶರಾಯ




**ಪಾಠ ಪ್ರವೇಶ :** ಕಥೆಗಳೆಂದರೆ ಯಾರಿಗೆ ಇಷ್ಟವಾಗುವುದಿಲ್ಲ.? ನೀವು ಹಲವು ಕತೆಗಳನ್ನು ಕೇಳಿರಬಹುದು. ಕೆಲವರು ಅದೇ ಕತೆಗಳನ್ನು ಕಲಾತ್ಮಕ ರೂಪದಲ್ಲಿ ಹೊಸ ಮೆರುಗನ್ನು ನೀಡಿ ಹೇಳುತ್ತಾರೆ. ಅದೊಂದು ರೀತಿ ಸೃಜನಶೀಲ ಕಾರ್ಯವೂ ಹೌದು. ಅಂತಹ ಹಲವು ಕಥೆಗಳು ಕನ್ನಡದಲ್ಲಿ ಮರುಸೃಷ್ಟಿಯಾಗಿವೆ. ನೀವು ಕಿಂದರಿ ಜೋಗಿ ಕತೆಯನ್ನು ಕೇಳಿರಬಹುದು. ಅದೇ ಕತೆ ಇಲ್ಲಿ ಹೊಸ ಮೆರುಗನ್ನು ಪಡೆದಿದೆ. ಅದರ ವಿಶೇಷವೇನು? ನೀವೇ ಓದಿರಿ.

ಕನ್ನಡ ನಾಡಿನಲ್ಲಿ ಇಲಿಯೂರು ಎಂಬ ಊರು ಇತ್ತು. ಕೆಲವು ವರ್ಷಗಳ ಹಿಂದೆ ಅಲ್ಲಿ ಒಮ್ಮೆ ಇಲಿಗಳ ಕಾಟವು ಬಹಳ ಹೆಚ್ಚಾಯಿತು. ಅಡಿಗೆ ಮನೆಗಳಲ್ಲಿ ತುಪ್ಪ, ಬೆಣ್ಣೆ, ಮೊಸರುಗಳನ್ನು ನೆಲುವುಗಳಲ್ಲಿ ಇಟ್ಟರೂ ಇಲಿಗಳು ಸಾಲುಸಾಲಾಗಿ ಇಳಿದು ಬಂದು, ಅವನ್ನು ತಿಂದುಬಿಡುವುವು. ಸಣ್ಣ ಮಕ್ಕಳು ಊಟಕ್ಕೆ ಕುಳಿತರೆ ಒಂದು ತುತ್ತನ್ನು ಬಾಯಿಗೆ ಎತ್ತಿ ಇನ್ನೊಂದು ತುತ್ತಿಗೆ ಕೈ ಹಾಕುವಷ್ಟರಲ್ಲಿ ಬಟ್ಟಲು ಬರಿದಾಗುತ್ತಿತ್ತು. ಪಲ್ಯ ಬಡಿಸಲಿಕ್ಕೆ ಬಂದ ಅಡಿಗೆಯವನು ಅನ್ನದ ಪಾತ್ರೆಯನ್ನು ತರುವಷ್ಟರಲ್ಲಿ ಅನ್ನದ ಪಾತ್ರೆಗೆ ಇಲಿಗಳು ಮುತ್ತಿಕೊಂಡು ಅರೆವಾಸಿ ಪಾತ್ರೆಯನ್ನು ಖಾಲಿ ಮಾಡುತ್ತಿದ್ದವು.

ಒಂದು ಮನೆಯಲ್ಲಿ ಆಳು ಹಾಸಿಗೆಯನ್ನು ಹಾಸಿ ಮಲಗುವ ಕೋಣೆಯ ಬಾಗಿಲನ್ನು ಹಾಕಿದನು. ಅಲ್ಲಿ ಮಲಗಲಿಕ್ಕೆ ಮನೆಯವರು ಬರುವಷ್ಟರಲ್ಲಿ ಇಲಿಗಳು ಹಾಸಿಗೆಯ ಬಟ್ಟೆಯನ್ನು ಕಡಿದು ಅದರೊಳಗಿನ ಹತ್ತಿಯನ್ನು ಕೋಣೆಯಲ್ಲಿ ಚದರಿಬಿಟ್ಟಿದ್ದವು. ಇನ್ನೊಂದು ಮನೆಯವರು ದೇವಸ್ಥಾನದ ಉತ್ಸವವನ್ನು ನೋಡಲಿಕ್ಕೆ ನಿಶ್ಚಯಿಸಿದ್ದರು. ಪೆಟ್ಟಿಗೆಯೊಳಗಿನ ಪಟ್ಟೆ ಬಟ್ಟೆಗಳನ್ನೂ, ಜರಿ ಬಟ್ಟೆಗಳನ್ನೂ ತೆಗೆದಿಟ್ಟು ಒಂದೊಂದನ್ನೇ ಧರಿಸಿಕೊಳ್ಳತೊಡಗಿದರು. ಅಷ್ಟರಲ್ಲಿ ಇಲಿಗಳು ಉಳಿದ ಬಟ್ಟೆಗಳನ್ನು ಕತ್ತರಿಸಿ ಚೂರು ಚೂರಾಗಿ ಮಾಡಿದವು.

ರಾತ್ರಿಯಲ್ಲಿ ಮಲಗಿದವರ ಕೈಕಾಲುಗಳ ಚರ್ಮವನ್ನು ಕೂಡಾ ಇಲಿಗಳು ಹರಿತವಾದ ಹಲ್ಲುಗಳಿಂದ ಕತ್ತರಿಸಿಬಿಡುತ್ತಿದ್ದವು. ಇಲಿಗಳು ಮಾಡಿನ ಗಳಗಳನ್ನು ಕತ್ತರಿಸಿದ್ದರಿಂದ ಮಾಡುಗಳು ಈಗಲೇ ತಲೆಯ ಮೇಲೆ ಕಳಚಿ ಬೀಳುತ್ತವೋ ಎಂಬಂತೆ ಜೋಲುತ್ತಿದ್ದವು. ಕಿಟಕಿ ಬಾಗಿಲುಗಳ ಕದಗಳನ್ನು ಕೊರೆದುಬಿಟ್ಟಿದ್ದರಿಂದ ಹಲಗೆಗಳು ಬಲೆಗಳಂತೆ ಕಾಣುತ್ತಿದ್ದವು.

ಈ ಇಲಿಗಳನ್ನು ಹಿಡಿಯಬೇಕೆಂದು ಊರಿನವರು ಬೋನುಗಳನ್ನು ತರಿಸಿದರು. ಆ ಬೋನುಗಳ ಬಿಲ್ಲಿನ ಸರಿಗೆಗಳನ್ನು ಇಲಿಗಳು ಕಡಿದುಬಿಟ್ಟವು. ಬೆಕ್ಕು ನಾಯಿಗಳನ್ನು ಜನರು ಸಾಕಿದರು. ಆದರೆ ಇಲಿಗಳು ಬೆಕ್ಕುನಾಯಿಗಳಿಗೆ ಸಿಗದೆ ತಪ್ಪಿಸಿಕೊಳ್ಳುತ್ತಿದ್ದವು. ಹೀಗಾಗಿ ಎಲ್ಲರೂ ಬಹಳ ಕಷ್ಟಪಟ್ಟರು.

ಕಡೆಗೆ ಒಂದುದಿನ ಊರಿನ ಜನರೆಲ್ಲ ಆ ಊರ ಗೌಡನ ಚಾವಡಿಯಲ್ಲಿ ಸಭೆ ಸೇರಿದರು. ಬಹಳ ಹೊತ್ತು ಎಲ್ಲರೂ ಆಲೋಚನೆ ಮಾಡಿದ ಮೇಲೆ ಈ ಅವಾಂತರದಿಂದ ತಪ್ಪಿಸುವವರಿಗೆ ಇನ್ನೂರು ರೂಪಾಯಿಯ ಚಿನ್ನದ ಕಡಗವನ್ನು ಇನಾಮು ಕೊಡುವುದಾಗಿ ಗೌಡನು ಹೇಳಿದನು. ಎಲ್ಲರೂ ಆದೀತೆಂದು ಒಪ್ಪಿದರು.

ಆ ಸಮಯದಲ್ಲಿ ಅಲ್ಲಿ ಒಬ್ಬ ಜೋಗಿ ಬಂದನು. ಅವನು ಯಾವಾಗಲೂ ಒಂದೇ ಊರಿನಲ್ಲಿ ಇರುವವನಲ್ಲ. ಅವನಿಗೆ ಮನೆಮಾರು ಇರಲಿಲ್ಲ. ಹಗಲೆಲ್ಲ ತಿರುಪೆ ಎತ್ತುವನು; ಒಂದು ಮರದ ನೆಳಲಲ್ಲಿ ಅನ್ನ ಬೇಯಿಸಿ ಊಟ ಮಾಡುವನು. ರಾತ್ರಿಯಾದೊಡನೆ ಮರದ ಅಡಿಯಲ್ಲಿಯೇ ಬಿದ್ದುಕೊಳ್ಳುವನು. ಬೆಳಕು ಹರಿದ ಕೂಡಲೇ ಹೊರಟು ಇನ್ನೊಂದು ಊರಿಗೆ ಹೋಗುವನು.

ಅವನ ಮೈಮೇಲೆ ಬಟ್ಟೆ ಇರಲಿಲ್ಲ; ಉಡಲಿಕ್ಕೆ ಅರಿವೆ ಇರಲಿಲ್ಲ. ಒಂದು ಹುಲಿಯ ತೊಗಲನ್ನು ಸೊಂಟಕ್ಕೆ ಸುತ್ತಿಕೊಳ್ಳುತ್ತಿದ್ದನು. ಇನ್ನೊಂದನ್ನು ಹೆಗಲಿನಲ್ಲಿ ಹೊದ್ದುಕೊಳ್ಳುತ್ತಿದ್ದನು. ರಾತ್ರಿಯಲ್ಲಿ ಅದನ್ನೇ ಹಾಸಿಕೊಳ್ಳುತ್ತಿದ್ದನು.

ಅವನ ಬಳಿಯಲ್ಲಿ ಬಿದಿರಿನ ಒಂದು ಕೊಳಲು ಇತ್ತು. ಅದನ್ನು ಬಾರಿಸುತ್ತ ಅವನು ಮನೆ ಮನೆ ತಿರುಗುವನು. ಅದರ ಸ್ವರವನ್ನು ಕೇಳಿದವರು ಅವನಿಗೆ ಏನಾದರೂ ಕೊಡದೆ ಹೋಗುತ್ತಿರಲಿಲ್ಲ.

ಈ ಕೊಳಲ ಜೋಗಿಯು ಗೌಡನ ಚಾವಡಿಯಲ್ಲಿ ಕೂಡಿದವರನ್ನು ಕಂಡನು. ಅವರ ಮಾತನ್ನು ಕೇಳಿ ತಾನು ಈ ಇಲಿಗಳ ಕಾಟವನ್ನು ತಪ್ಪಿಸುವೆನೆಂದು ಒಪ್ಪಿಕೊಂಡನು. ಅವನ ಮಾತನ್ನು ಯಾರೂ ಮೊದಲು ನಂಬಲಿಲ್ಲ. ಅವನು ಒಂದು ವಿಚಿತ್ರ ರೀತಿಯಿಂದ ಕೊಳಲನ್ನು ಬಾರಿಸಲು ತೊಡಗಿದನು. ಯಾರೂ ಆ ರಾಗವನ್ನು ಅದುವರೆಗೆ ಕೇಳಿದ್ದಿಲ್ಲ. ಆದರೆ ಅವನು ಬಾರಿಸುತ್ತಿದ್ದ ಹಾಗೆ ಇಲಿಗಳು ಒಂದು, ಎರಡು, ಹತ್ತು, ಇಪ್ಪತ್ತು, ಐವತ್ತು, ನೂರು, ಸಾವಿರ, ಲಕ್ಷ ಹೀಗೆ ಸಾಲುಕಟ್ಟಿ ಅವನ ಸುತ್ತು ಬಂದು ಸೇರಿದವು. ಅಲ್ಲಿ ಕುಣಿದಾಡತೊಡಗಿದವು. ಆಮೇಲೆ ಅವನು ಗೌಡನ ಅಂಗಳದಿಂದ ಬೀದಿಗೆ ಇಳಿದನು. ಅವನ ಕೊಳಲಿನ ಸ್ವರವನ್ನು ಕೇಳಿ ನೆರೆಮನೆಯ ಇಲಿಗಳೂ ಬಂದು ಸೇರಿದವು. ಹೀಗೆ ಬೀದಿಯ ಉದ್ದಕ್ಕೆ ಅವನು ಹೋಗುವಷ್ಟರಲ್ಲಿ ಊರಿನ ಇಲಿಗಳೆಲ್ಲ ಬೀದಿಗೆ ಇಳಿದಿದ್ದವು. ಮನೆ ಮಾಡುಗಳಲ್ಲಿ, ಗೋಡೆ ಸಂದುಗಳಲ್ಲಿ, ಜಗಲಿಯ ಬಿಲಗಳಲ್ಲಿ, ಕತ್ತಲಾದ ಕೋಣೆಗಳಲ್ಲಿ,

ಹಳೆ ಮರಗಳ ಪೊಟರೆಗಳಲ್ಲಿ ಇರುವ ಒಂದೇ ಒಂದು ಇಲಿಯಾದರೂ ಹಿಂದೆ ನಿಲ್ಲಲಿಲ್ಲ. ಬೀದಿ ತುಂಬಾ ಇಲಿಗಳು ಇದ್ದು ಸೂಜಿಮೊನೆಗೆ ಕೂಡಾ ಸ್ಥಳ ಸಿಗಲಿಲ್ಲ.

ಜೋಗಿ ಕೊಳಲನ್ನು ಬಾರಿಸುತ್ತ ಊರಿನ ಹೊರಗೆ ಹೋದನು. ಊರ ಜನರು ನೋಡುತ್ತಿದ್ದ ಹಾಗೆ ಇಲಿಗಳೆಲ್ಲ ಅವನನ್ನು ಹಿಂಬಾಲಿಸಿದವು. ಕಡೆಗೆ ಸ್ವಲ್ಪ ದೂರದಲ್ಲಿರುವ ಹಳ್ಳದ ಕಡೆಗೆ ಹೋದನು. ಆಗಲೂ ಆ ಇಲಿಗಳ ಗುಂಪು ಅವನ ಹಿಂದೆಯೇ ಬಂತು. ಕೊಳಲನ್ನು ಬಾರಿಸುತ್ತ ಅವನು ಹಳ್ಳದಲ್ಲಿ ಇಳಿದನು. ಕೊಳಲಿನ ಸ್ವರದಿಂದ ಮಂಕಾದ ಇಲಿಗಳು ನೀರಿಗೆ ಇಳಿದವು. ಧಾರಾಳವಾಗಿ ತಿಂದು ಹೊಟ್ಟೆ ಬೆಳೆದ ಇಲಿಗಳಿಗೆ ಈಸಲಿಕ್ಕೆ ಗೊತ್ತಿದ್ದಿಲ್ಲ. ಅವೆಲ್ಲವೂ ನೀರಿನಲ್ಲಿ ಮುಳುಗಿ ಸತ್ತುಹೋದವು.

ಕೊಳಲ ಜೋಗಿಯು ಹಳ್ಳದಿಂದ ಮೇಲಕ್ಕೆ ಬಂದು ಊರಿನ ಕಡೆಗೆ ತಿರುಗಿದನು. ಅಲ್ಲಿ ಸಂತೆ ಮೈದಾನದಲ್ಲಿ ಊರ ಜನರು, ಹೆಂಗಸರು, ಮಕ್ಕಳು ಸಮೇತ ಜೋಗಿಯ ಈ ಆಟವನ್ನು ನೋಡಲು ಕೂಡಿದ್ದರು. ಗೌಡನು ಅಲ್ಲಿ ದೂರದಲ್ಲಿ ನಿಂತಿದ್ದನು. ಜೋಗಿಯು ಅವನ ಬಳಿಗೆ ಬಂದು, "ಒಡೆಯಾ! ನನ್ನ ಕೆಲಸ ತೀರಿತು. ನನ್ನ ಇನಾಮು ಕೊಡೋಣಾಗಲಿ" ಎಂದು ಕೈ ಜೋಡಿಸಿದನು.

ಜೋಗಿಯ ವೇಷವನ್ನು ನೋಡಿದ ಗೌಡನಿಗೆ ಅಷ್ಟು ಬೆಲೆಯ ಇನಾಮನ್ನು ಕೊಡುವ ಮನಸ್ಸಿದ್ದಿಲ್ಲ. ಏನಾದರೂ ಉಪಾಯದಿಂದ ಜೋಗಿಗೆ ಬೆದರಿಸಬೇಕೆಂದು ಸ್ವಲ್ಪ ಹೊತ್ತು ಆಲೋಚಿಸಿ "ಎಲೋ, ತಿರುಕ ಜೋಗಿ! ಬಟ್ಟೆ ಬರೆಯಿಲ್ಲದವನಿಗೆ ೨೦೦ ರೂಪಾಯಿ ಬೆಲೆಯ ಕಡಗ ಕೊಟ್ಟರೆ ಯಾರಾದರೂ ಅದನ್ನು ಕದ್ದುಬಿಟ್ಟಾರು. ನಿನಗೆ ಯಾಕೆ ಅದರ ಗಲಾಟೆ? ನಿನಗೆ ಹೊಟ್ಟೆ ತುಂಬಾ ಒಂದು ಊಟ ಸಿಕ್ಕಿದರೆ ಸಾಲದೆ? ಹೋಗು, ಸುಮ್ಮನೆ ಕಡಗದ ಆಸೆ ಮಾಡಬೇಡ. ನಮ್ಮ ಬಚ್ಚಲ ಮನೆಯಲ್ಲಿ ಕುಳಿತುಕೋ, ಮನೆಯವರ ಊಟ ಆದೊಡನೆ ನಿನಗೂ ಒಂದು ಹಿಡಿ ಅನ್ನ ಇಕ್ಕಬಹುದು" ಎಂದನು. ಆಗ ಹಳ್ಳಿ ಗೌಡನು ಆ ಊರಿನ ದೊಡ್ಡ ಮನುಷ್ಯನಾದ್ದರಿಂದ ಅವನ ಮಾತಿಗೆ ಎಲ್ಲರೂ ನಕ್ಕು "ಸೈ, ಸೈ, ತಿರುಕನಿಗೆ ಅಷ್ಟೆ ಸಾಕು" ಎಂದರು.

ಕೊಳಲ ಜೋಗಿಗೆ ತುಂಬಾ ವ್ಯಸನವಾಯಿತು. "ಹೇಳಿದ ಮಾತನ್ನು ನಡೆಸುವುದಕ್ಕೆ ದೊಡ್ಡ ಮನುಷ್ಯರಿಗೆ ಮನಸ್ಸಿಲ್ಲ, ಅಲ್ಲವೇ!" ಎಂದು ಹೇಳಿ ಜೋಗಿ ಕೊಳಲನ್ನು ಪುನಃ ಬಾಯಿಗೆ ಇಟ್ಟನು. ಈಗ ಕೊಳಲಿನಿಂದ ಹೊರಟ ಸ್ವರವೇ ಬೇರೆಯಾಗಿತ್ತು. ಅದನ್ನು ಕೇಳಿದೊಡನೆ ಜೋಗಿಯನ್ನು ಎವೆಯಿಕ್ಕದೆ ನೋಡುತ್ತ ಸಂತೆಯಲ್ಲಿ ಕೂಡಿದ ಜನರು ತಟಸ್ಥರಾದರು. ಕಡೆಗೆ ಕೊಳಲಿನ ಸ್ವರವು ಹೇಗೆ ಜೋರಾಯಿತೋ ಹಾಗೆ ಮೊದಲು ಊರ ಗೌಡನು, ಆಮೇಲೆ ಬೇರೆ ಜನರು ತಾಳಹಾಕಿ ಕುಣಿಯತೊಡಗಿದರು.



ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ಕೈಯಿಂದ ತಾಳ ಹಾಕುತ್ತ ಸಂತೆಯ ಮೈದಾನದಲ್ಲಿ ಕುಣಿಯುತ್ತಿದ್ದರು. ಆಗ ಕೆಲವರು ಹಾಡಲಿಕ್ಕೂ ತೊಡಗಿದರು. ಸಂತೆ ಮೈದಾನದಲ್ಲಿ ಬಹಳ ಗದ್ದಲವಾಯಿತು. ಕಡೆಗೆ ಎಲ್ಲರಿಗೂ ಹಾಡಿ ಹಾಡಿ ಗಂಟಲು ಆರಿತು; ಕಾಲುಗಳು ದಣಿದವು; ಮೈ ಮೇಲಿಂದ ಬೆವರು ಸುರಿಯುತ್ತಿತ್ತು. ಆದರೂ ಕೊಳಲ ಜೋಗಿ ಕೊಳಲು ಬಾರಿಸುವುದನ್ನು ನಿಲ್ಲಿಸಲಿಲ್ಲ. ಜನರು ಹಾಡುವುದನ್ನೂ ಕುಣಿಯುವುದನ್ನೂ ನಿಲ್ಲಿಸಲಾರದೆ ಹೋದರು. ಮಕ್ಕಳು ಕಾಲು ಸೋತು ನೆಲದ ಮೇಲೆ ಬಿದ್ದವು. ಆದರೂ ಬಿದ್ದಲ್ಲಿಯೇ ಕೈಗಳಿಂದ ತಾಳ ಹಾಕುವುದನ್ನು ನೋಡಿ ಊರಿನ ಮುಖಂಡರು "ನಿನ್ನ ಕೊಳಲು ಸಾಕುಮಾಡೋ, ಮಹಾರಾಯಾ! ಇನ್ನು ತಾಳ ಹಾಕಲಿಕ್ಕೆ ಬರುವುದಿಲ್ಲ. ಕೈಗಳಿಗೆ ಗುಳ್ಳೆ ಎದ್ದಿತು, ಕಾಲುಗಳು ಸೋತು ಹೋದವು" ಎಂದು ಮೊರೆಯಿಟ್ಟರು.

ಊರ ಗೌಡನಿಗೆ ದೊಡ್ಡ ಹೊಟ್ಟೆಯಿತ್ತು. ಅವನು ಇನ್ನು ಕುಣಿಯಲಾರದೆ ಕಡೆಗೆ ಧೊಪ್ಪನೆ ಕೆಳಗೆ ಬಿದ್ದುಬಿಟ್ಟನು. ಎರಡು ಕೈಗಳನ್ನು ಜೋಡಿಸಿ "ಮಹಾರಾಯಾ! ನಿನ್ನ ಕಡಗವನ್ನು ಕೊಡುತ್ತೇವೆ. ನಿನ್ನ ಕೊಳಲು ಬಾರಿಸುವುದನ್ನು ಒಮ್ಮೆ ನಿಲ್ಲಿಸು" ಎಂದನು. ಕೊಳಲ ಜೋಗಿಗೆ ಇವನ ಸ್ಥಿತಿಯನ್ನು ನೋಡಿ ಕನಿಕರ ಹುಟ್ಟಿತು. ಕೊಳಲು ಬಾರಿಸುವುದನ್ನು ಅವನು ನಿಲ್ಲಿಸಿದನು. ಸ್ವಲ್ಪ ದಣಿವಾರಿದ ಮೇಲೆ ಎಲ್ಲರೂ ಕುಳಿತುಕೊಂಡು ಕೊಳಲ ಜೋಗಿಗೆ ಇನಾಮು ಕೊಡಲಿಕ್ಕಾಗಿ ೨೦೦ ರೂಪಾಯಿ ವಂತಿಗೆ ಮಾಡಿ ಕೂಡಲೇ ಅವನ ಮುಂದಿಟ್ಟರು. ಆಗ ಜೋಗಿಯು ಅದನ್ನು ಕಂಡು ನಸುನಕ್ಕು,

"ತಿರುಕನಾದ ನನಗೆ ಈ ಹಣವೇನೂ ಬೇಕಿಲ್ಲ, ಇದರಿಂದ ನಿಮ್ಮ ಊರ ಹೊರಗಿನ ಹಾಳು ಗುಡಿಯನ್ನು ಸರಿಮಾಡಿಸಿರಿ. ನನಗೆ ಮಾತುಕೊಟ್ಟು ಮೋಸ ಮಾಡಿದ್ದರಿಂದ ನೀವು ಈ ರೀತಿಯ ಕಷ್ಟದಲ್ಲಿ ಬೀಳಬೇಕಾಯಿತು. ಇನ್ನಾದರೂ ಆಡಿ ತಪ್ಪಬೇಡಿ" ಎಂದು ಹೇಳಿ ಹೊರಟು ಹೋದನು. ಅಂದಿನಿಂದ ಆ ಊರಿಗೆ ಇಲಿಯೂರು ಎಂಬ ಹೆಸರು ಹೋಗಿ ಕೊಳಲೂರು ಎಂಬ ಹೆಸರು ಬಂದಿದೆ.

* * * *

## ಕೃತಿಕಾರರ ಪರಿಚಯ :



**ಪಂಜೆ ಮಂಗೇಶರಾಯ** ಅವರು ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳದಲ್ಲಿ ೧೮೭೪ ರಲ್ಲಿ ಜನಿಸಿದರು. 'ಪಂಜ' ಎಂಬುದು ಅವರ ಪೂರ್ವಜರ ವಾಸಸ್ಥಳ. ಇವರು ಕನ್ನಡದ ಅಧ್ಯಾಪಕರಾಗಿ, ಶಾಲಾ ತನಿಖಾಧಿಕಾರಿಯಾಗಿ, ಶಿಕ್ಷಕ ತರಬೇತಿ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಇವರು 'ಪಂಚ ಕಜ್ಜಾಯ', 'ಹುತ್ತರಿ ಹಾಡು', 'ತೆಂಕಣಗಾಳಿಯಾಟ', 'ಐತಿಹಾಸಿಕ ಕಥಾವಳಿ', 'ಕೋಟಿ ಚೆನ್ನಯ್ಯ', 'ಅಜ್ಜಿ ಸಾಕಿದ ಮಗ' ಮುಂತಾದ ಕೃತಿಗಳನ್ನು 'ಕವಿಶಿಷ್ಯ' ಎನ್ನುವ ಕಾವ್ಯನಾಮದಿಂದ ರಚಿಸಿದ್ದಾರೆ. ಇವರು ೧೯೩೭ ರಲ್ಲಿ ನಿಧನರಾದರು.



## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅರಿವೆ** – ಬಟ್ಟೆ; ವಸ್ತ್ರ.

**ಅವಾಂತರ** – ಗಡಿಬಿಡಿ

**ಆಳು** – ಸೇವಕ

**ಇನಾಮು** – ಬಹುಮಾನ

**ಎವೆಯಿಕ್ಕದೆ** –ಕಣ್ಣು ಮಿಟುಕಿಸದೆ ನೋಡುವುದು.

**ಕಡಗ** – ಕೈಗೆ ಹಾಕಿಕೊಳ್ಳುವ ಬಳೆ.

**ಕಾಟ** – ತೊಂದರೆ

**ಚಾವಡಿ** – ಹಳ್ಳಿಯಲ್ಲಿ ಸಭೆ ಸೇರುವ ಸ್ಥಳ.

**ಜಗಲಿ** – ಕಟ್ಟೆ; ವೇದಿಕೆ.

**ಜೋಗಿ** – ಯೋಗಿ; ತಪಸ್ವಿ; ಬೈರಾಗಿ.

**ತಟಸ್ಥ** – ಚಲನೆ ಇಲ್ಲದಿರುವುದು.

**ತಿರುಕ** – ಭಿಕ್ಷುಕ

**ತಿರುಪೆ** – ಭಿಕ್ಷೆ; ಯಾಚನೆ.

**ತೊಗಲು** – ಚರ್ಮ

**ನೆಲುವು** – ಪಾತ್ರೆಗಳನ್ನು ಇಡುವುದಕ್ಕೆ ಇಳಿಬಿಡುವ ಹಗ್ಗದ ಜಾಳಿಗೆ.

**ಬಿಲ** – ಡೊಗರು

**ಮಂಕು** – ಮಬ್ಬು; ಕಾಂತಿ ಇಲ್ಲದಿರುವಿಕೆ.

**ಮಾಡು** – ಛಾವಣಿ

**ಮೊನೆ** – ತುದಿ; ಚೂಪಾದ.

**ಮೊರೆ** – ಬೇಡು

**ವಂತಿಗೆ** – ಚಂದಾ ಹಣ.

**ವ್ಯಸನ** – ಚಿಂತೆ; ದುಃಖ.

**ಸರಿಗೆ** – ಲೋಹದ ತಂತಿ.

## II. ಪ್ರಶ್ನೆಗಳು :

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಇಲಿಗಳು ಹಾಸಿಗೆಯನ್ನು ಯಾವ ರೀತಿ ಹಾಳು ಮಾಡಿದವು?

೨. ದೇವಸ್ಥಾನದ ಉತ್ಸವಕ್ಕೆ ಹೊರಟವರಿಗೆ ಇಲಿಗಳು ಯಾವ ರೀತಿ ತೊಂದರೆ ಮಾಡಿದವು?

೩. ಇಲಿಗಳ ಕಾಟ ತಪ್ಪಿಸಲು ಒಪ್ಪಿಕೊಂಡವರು ಯಾರು?

೪. ಜೋಗಿಯ ಕೊಳಲ ರಾಗಕ್ಕೆ ಇಲಿಗಳು ಹೇಗೆ ಸಾಲುಗಟ್ಟಿ ಬಂದವು?

೫. ಇಲಿಗಳ ಕಾಟ ತಪ್ಪಿಸಿದ ಜೋಗಿಯು ಊರ ಗೌಡನ ಬಳಿ ಬಂದು ಏನೆಂದು ಕೇಳಿದನು?

೬. ಕೊಳಲ ಜೋಗಿ ಕತೆಯ ನೀತಿ ಏನು?

೭. ಪಂಜೆ ಮಂಗೇಶರಾಯರ ಕಾವ್ಯನಾಮ ಯಾವುದು?



**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅಡಿಗೆ ಮನೆಯಲ್ಲಿ ಇಲಿಗಳಿಂದ ಯಾವ ತೊಂದರೆಗಳಾಗುತ್ತಿದ್ದವು?

೨. ಇಲಿಗಳಿಂದ ಹಾಳಾದ ಮನೆಯ ಮಾಡು, ಕಿಟಕಿ, ಬಾಗಿಲುಗಳು ಹೇಗೆ ಕಾಣುತ್ತಿದ್ದವು?

೩. ಜನರು ಇಲಿಗಳನ್ನು ಹಿಡಿಯಲು ಯಾವ ಯಾವ ಪ್ರಯತ್ನಗಳನ್ನು ಮಾಡಿದರು?

೪. ಇಲಿಗಳ ಕಾಟ ತಪ್ಪಿಸಲು ಊರ ಗೌಡನು ಯಾವ ತೀರ್ಮಾನ ಕೈಗೊಂಡನು?

೫. ಜೋಗಿಯು ಯಾವ ರೀತಿಯ ಜೀವನ ನಡೆಸುತ್ತಿದ್ದನು?

೬. ಜೋಗಿಯ ಉಡುಗೆ ತೊಡುಗೆಗಳು ಹೇಗಿದ್ದವು?

೭. ಜೋಗಿಯ ಕೊಳಲ ರಾಗಕ್ಕೆ ಇಲಿಗಳು ಯಾವ ಯಾವ ಸ್ಥಳಗಳಿಂದ ಹೊರಬಂದವು?
೮. ಊರ ಗೌಡನು ಜೋಗಿಗೆ ಇನಾಮು ಕೊಡದೆ ಏನೆಂದು ತಿರಸ್ಕರಿಸಿದನು?
೯. ಜೋಗಿಯು ಊರ ಜನರಿಂದ ಇನಾಮು ಪಡೆಯದೆ ಏನೆಂದು ಹೇಳಿದನು?
೧೦. ಇಲಿಯೂರಿಗೆ ಕೊಳಲೂರು ಎಂಬ ಹೆಸರು ಹೇಗೆ ಬಂತು?
೧೧. ಜೋಗಿಯ ಯಾವ ಗುಣ ಇಷ್ಟವಾಯಿತು? ಏಕೆ?

**ಇ. ಕೆಳಗಿನ ಪ್ರಶ್ನೆಗಳಿಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಇಲಿಯೂರಿನಲ್ಲಿ ಇಲಿಗಳ ಕಾಟ ಯಾವ ಯಾವ ರೀತಿ ಇತ್ತು?
೨. ಜೋಗಿಯು ಇಲಿಗಳನ್ನು ಯಾವ ರೀತಿ ನಾಶ ಮಾಡಿದನು?
೩. ಜೋಗಿಗೆ ಇನಾಮು ಕೊಡಲು ತಿರಸ್ಕರಿಸಿದ ಊರ ಜನರಿಗೆ ಯಾವ ಗತಿ ಉಂಟಾಯಿತು?

**ಈ. ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. ಒಡೆಯಾ! ನನ್ನ ಕೆಲಸ ತೀರಿತು. ನನ್ನ ಇನಾಮು ಕೊಡೋಣಾಗಲಿ.
೨. ನಿನಗೆ ಹೊಟ್ಟೆ ತುಂಬಾ ಒಂದು ಊಟ ಸಿಕ್ಕಿದರೆ ಸಾಲದೆ?
೩. ಸೈ, ಸೈ, ತಿರುಕನಿಗೆ ಅಷ್ಟೇ ಸಾಕು.
೪. ನಿನ್ನ ಕೊಳಲು ಸಾಕು ಮಾಡೋ ಮಹಾರಾಯ!
೫. ಇನ್ನಾದರೂ ಆಡಿ ತಪ್ಪಬೇಡಿ.

## III. ಭಾಷಾಭ್ಯಾಸ :

**ಅ. ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಕನಿಕರ : ____________________
೨. ಮೊರೆಯಿಡು : ____________________
೩. ಉತ್ಸವ : ____________________
೪. ನಿಶ್ಚಯಿಸು : ____________________
೫. ಅವಾಂತರ : ____________________

ಆ. ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಉಪಾಯ x ____________

೨. ಆಸೆ x ____________

೩. ಬೆಳಕು x ____________

೪. ರಾತ್ರಿ x ____________

೫. ಕಷ್ಟ x ____________

ಇ. ಕೆಳಗೆ ನೀಡಲಾಗಿರುವ ವಾಕ್ಯಗಳಲ್ಲಿನ ಪದಗಳನ್ನು ಅರ್ಥಪೂರ್ಣವಾಗಿ ಜೋಡಿಸಿ ಬರೆಯಿರಿ.

೧. ಹೊರಗೆ ಜೋಗಿ ಊರಿನ ಕೊಳಲನ್ನು ಹೋದನು ಬಾರಿಸುತ್ತ

೨. ತರಿಸಿದರು ಇಲಿಗಳನ್ನು ಬೋನುಗಳನ್ನು ಹಿಡಿಯಬೇಕೆಂದು ಊರಿನವರು

೩. ಕೊಳಲು ಜೋಗಿ ಇತ್ತು ಬಿದುರಿನ ಬಳಿಯಲ್ಲಿ

## IV. ಚಟುವಟಿಕೆಗಳು :

೧. ಕುವೆಂಪು ಅವರ 'ಕಿಂದರಿ ಜೋಗಿ' ಕವನವನ್ನು ಓದಿರಿ.

೨. ಕೊಳಲ ಜೋಗಿ ಕಥೆಯನ್ನು ನಿಮ್ಮದೇ ಧಾಟಿಯಲ್ಲಿ ಹಾವಭಾವಗಳೊಂದಿಗೆ ಹೇಳಿರಿ.

೩. ಕೊಳಲ ಜೋಗಿ ಕಥೆಯಲ್ಲಿ ಬರುವ ಲೇಖನ ಚಿಹ್ನೆಗಳನ್ನು ಗಮನಿಸಿರಿ.

* * * *

ಪಾಠ – ೧೦

# ದಾನಚಿಂತಾಮಣಿ ಅತ್ತಿಮಬ್ಬೆ




**ಪಾಠ ಪ್ರವೇಶ :**

ದಾನ, ಧರ್ಮಗಳಿಗೆ ಹೆಸರುವಾಸಿಯಾದ ನಾಡು ನಮ್ಮದು. ದಾನವೆಂಬುದು ಉದಾರತೆಯ ಸಂಕೇತ. ವಿನಯ ತುಂಬಿದ ನಡವಳಿಕೆ. ಸಾರ್ವಜನಿಕ ಬದುಕನ್ನು ಸುಧಾರಿಸುವ ಮನೋಭಾವ. ಸಾರ್ವಜನಿಕ ಕೆಲಸಗಳನ್ನು ಉತ್ತೇಜಿಸುವ ಕಾರ್ಯವದು. ಅಂತಹ ದಾನ ಶ್ರೇಷ್ಠರಲ್ಲಿ ಅತ್ತಿಮಬ್ಬೆ ಕನ್ನಡ ನಾಡಿನಲ್ಲಿ ಹೆಸರುವಾಸಿಯಾಗಿದ್ದಾಳೆ. ಅತ್ತಿಮಬ್ಬೆಯ ವಿನಯ, ವಿವೇಕ, ಶೌರ್ಯ ಮೊದಲಾದ ಆದರ್ಶ ನಡವಳಿಕೆಗಳನ್ನು ಈ ಪಾಠದಲ್ಲಿ ಪರಿಚಯಿಸಲಾಗಿದೆ. ವಿದ್ಯಾರ್ಥಿಗಳು ಇಂತಹ ಆದರ್ಶ ಗುಣಗಳನ್ನು ಅಳವಡಿಸಿಕೊಳ್ಳಬೇಕು.

ನಮ್ಮ ಕರ್ನಾಟಕವು ಕವಿ–ಕಲಿಗಳ ನಾಡು. ಸಂಸ್ಕೃತಿಯ ನೆಲೆವೀಡು. ವೀರ ಪುರುಷರ, ವೀರ ರಮಣಿಯರ ನಾಡು. ಇಲ್ಲಿ ಯುದ್ಧ ವೀರರಷ್ಟೇ ಅಲ್ಲದೆ ದಾನ ವೀರರೂ ಇದ್ದಾರೆ. ದಾನ ವೀರತೆಗೆ ಹೆಸರಾದವರಲ್ಲಿ ಅತ್ತಿಮಬ್ಬೆ ಸಹ ಒಬ್ಬಳು.

ಹತ್ತನೆಯ ಶತಮಾನದಲ್ಲಿ ಜೀವಿಸಿದ್ದ ಅತಿಮಬ್ಬೆಯ ತಂದೆ ಮಲ್ಲಪ, ತಾಯಿ ಅಬ್ಬಕಬ್ಬೆ. ಇವಳ ಹುಟ್ಟೂರು ವೆಂಗಿಮಂಡಲದ ಪುಂಗನೂರು. ತಂದೆ–ತಾಯಿ ಸುಸಂಸ್ಕೃತರು. ಮಲ್ಲಪನ ಎಂಟು ಮಕ್ಕಳಲ್ಲಿ ಅತ್ತಿಮಬ್ಬೆ ಗುಂಡುಮಬ್ಬೆಯರು ಅವಳಿ ಮಕ್ಕಳು. 'ಬೆಳೆವ ಸಿರಿ ಮೊಳಕೆಯಲ್ಲಿ' ಎಂಬಂತೆ ಅತ್ತಿಮಬ್ಬೆ ಬಾಲ್ಯದಲ್ಲಿಯೇ ಅತಿಚತುರೆ. ವಿನಯ, ವಿವೇಕ ಸಂಪನ್ನೆಯಾದ ಇವಳು ಮನೆ ಮಂದಿಯ ಮುದ್ದಿನ ಮಗಳಾಗಿ ಬೆಳೆದಳು.

'ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆ' ಎಂಬಂತೆ ಅತ್ತಿಮಬ್ಬೆಗೆ ತಂದೆ ತಾಯಿಯಿಂದ ಉತ್ತಮ ಸಂಸ್ಕಾರ ದೊರೆಯಿತು. ಮಲ್ಲಪನು ಉತ್ತಮ ಗುರುಗಳನ್ನು ನೇಮಿಸಿ ಮಕ್ಕಳಿಗೆ ಮನೆಯಲ್ಲಿಯೇ ವಿದ್ಯಾಭ್ಯಾಸ ಮಾಡಿಸಿದನು. ಅತ್ತಿಮಬ್ಬೆಯು ಜಿನಚಂದ್ರ ಎಂಬ ಗುರುಗಳಿಂದ 'ಜಿನತತ್ವಗಳನ್ನು' ತಿಳಿದಳು. ಅಣ್ಣಂದಿರೊಂದಿಗೆ ತಾನೂ ಕತ್ತಿವರಸೆ, ಕುದುರೆ ಸವಾರಿ, ಬಿಲ್ವಿದ್ಯೆಗಳನ್ನು ಕಲಿತಳು.

ಮಹಾವೀರನೆಂದು ಪ್ರಖ್ಯಾತನಾದ ನಾಗದೇವನೊಂದಿಗೆ ಅತ್ತಿಮಬ್ಬೆಯ ವಿವಾಹವಾಯಿತು. ವಿವಾಹ ಸಂದರ್ಭದಲ್ಲಿ ಪೊನ್ನ ಮಹಾಕವಿಯ 'ಶಾಂತಿ ಪುರಾಣ' ಪ್ರಕಟಗೊಂಡಿತು. ಸಾಹಿತ್ಯಾಭಿಮಾನಿಯಾದ ಮಲ್ಲಪನು ಶಾಂತಿಪುರಾಣದ ಸಾವಿರ ಹಸ್ತಪ್ರತಿಗಳನ್ನು ಮಾಡಿಸಿದನು. ಮದುವೆಗೆ ಬಂದ ಬಂಧು–ಮಿತ್ರರಿಗೆ ಬಂಗಾರದ ಜಿನಬಿಂಬ ಹಾಗೂ ಹಸ್ತಪ್ರತಿಗಳನ್ನು ಉಡುಗೊರೆಯಾಗಿ ನೀಡಿದನು.

ಅತ್ತಿಮಬ್ಬೆ  ಬಾಗೇವಾಡಿಗೆ ಬಂದಳು. ಅತ್ತಿಮಬ್ಬೆಯು ಅತ್ತೆ ಮಾವನಿಗೆ ಮೆಚ್ಚಿನ ಸೊಸೆಯಾಗಿ, ಪತಿಗೆ ತಕ್ಕ ಸತಿಯಾದಳು. ತನ್ನ ಸನ್ನಡತೆಯಿಂದ ಮನೆಯಲ್ಲಿ ಎಲ್ಲರ ಪ್ರೀತಿ ಗಳಿಸಿದಳು. ಬಿಡುವಿನ ವೇಳೆಯಲ್ಲಿ ಪಂಪ ಮಹಾಕವಿಯ 'ಆದಿಪುರಾಣ' ಹಾಗೂ ಪೊನ್ನ ಮಹಾಕವಿಯ 'ಶಾಂತಿ ಪುರಾಣ'ಗಳ ಹಸ್ತಪ್ರತಿಗಳನ್ನು ಮಾಡಿಸುತ್ತಿದ್ದಳು. ಆಗಾಗ ಪತಿಯೊಂದಿಗೆ ಶಸ್ತ್ರಾಗಾರಕ್ಕೆ ಹೋಗಿ ಕತ್ತಿ, ಗದೆ, ಹಿಡಿದು ತನ್ನ ಕೈಚಳಕ ತೋರಿಸುತ್ತಿದ್ದಳು.

ಬಾಲಕನೊಬ್ಬ ಕಷ್ಟದಲ್ಲಿರುವುದನ್ನು ಕಂಡ ಅತ್ತಿಮಬ್ಬೆ ಮಮ್ಮಲ ಮರುಗಿದಳು. ಈತನಿಗೆ ಉತ್ತಮ ಮಾರ್ಗದರ್ಶನ ದೊರೆತರೆ ಪ್ರತಿಭಾ ಸಂಪನ್ನನಾಗುವನು ಎಂದು ಒಳಮನಸ್ಸು ಹೇಳಿತು. ಅಂತೆಯೇ ಬಾಲಕನಿಗೆ ಆಶ್ರಯ ದೊರಕಿಸಿಕೊಟ್ಟಳು. ಮುಂದೆ ಆ ಬಾಲಕ ಹೆಸರಾಂತ ಗುರುಗಳಾದ ಅಜಿತಸೇನಾಚಾರ್ಯರ ಶಿಷ್ಯನಾಗಿ ವಿದ್ಯಾಭ್ಯಾಸ ಮಾಡಿದನು. ಅತ್ತಿಮಬ್ಬೆ ಗುರುಕುಲಕ್ಕೆ ಸಾಕಷ್ಟು ಧನಸಹಾಯ ಮಾಡಿದಳು. ವಿದ್ಯಾ, ವಿನಯಸಂಪನ್ನೆಯಾದ ಅತ್ತಿಮಬ್ಬೆಯು ವಿದ್ಯಾಪ್ರಗತಿಗೆ ನೆರವಾಗಿ ವಿದ್ಯಾಪೋಷಿತೆಯೇ ಆದಳು ಎಂದು ಗುರುವೃಂದವು ಕೊಂಡಾಡಿತು. ಅತ್ತಿಮಬ್ಬೆಯ ಆಶ್ರಯ ಪಡೆದ ಆ ಬಾಲಕನಾರು ಗೊತ್ತೇ? ಆತನೇ ಕವಿಚಕ್ರವರ್ತಿ ಬಿರುದಾಂಕಿತ ರನ್ನಮಹಾಕವಿ. ರನ್ನಮಹಾಕವಿಯು 'ಸಾಹಸಭೀಮವಿಜಯ', 'ಅಜಿತತೀರ್ಥಂಕರ ಪುರಾಣ' ಮೊದಲಾದ ಕೃತಿಗಳನ್ನು ರಚಿಸಿದ್ದು, ಕನ್ನಡ ಸಾಹಿತ್ಯ ಲೋಕಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾನೆ.



ಅತ್ತಿಮಬ್ಬೆಯು ತಾಯಿಯಾಗುವ ವಿಚಾರ ತಿಳಿದು ಮನೆಯವರಿಗೆಲ್ಲ ಸಂತಸವಾಯಿತು. "ಒಂದು ಸಾವಿರ ಜಿನಾಲಯಗಳನ್ನು ಕಟ್ಟಿಸಬೇಕು. ಒಂದು ಸಾವಿರ ಬಂಗಾರದ ಜಿನಬಿಂಬಗಳನ್ನು ದಾನ ಮಾಡಬೇಕು. ಒಂದು ಸಾವಿರ ಮುನಿಗಳಿಗೆ ಆಹಾರ ನೀಡಬೇಕು" ಎಂಬುದೇ ಆಕೆಯ ಮಹಾಬಯಕೆಯಾಗಿತ್ತು. ಆ ಬಯಕೆ ಈಡೇರಿತು. ಅತ್ತಿಮಬ್ಬೆಯು ಗಂಡು ಮಗುವಿನ ತಾಯಿಯಾದಳು. ಮಗುವಿಗೆ ಅಣ್ಣಿಗದೇವ ಎಂದು ನಾಮಕರಣ ಮಾಡಿದರು.

ಅತ್ತಿಮಬ್ಬೆಯು ಕೆಲವು ವೇಳೆ ನಾಗದೇವನೊಂದಿಗೆ ತಾನೂ ಯುದ್ಧಕ್ಕೆ ಹೋಗುತ್ತಿದ್ದಳು. ಸಾರಥಿಯಾಗಿ ರಥ ನಡೆಸುತ್ತಿದ್ದಳು. ಕತ್ತಿ ಹಿಡಿದು ವೀರಾವೇಶದಿಂದ ಹೋರಾಡುತ್ತಿದ್ದಳು. ಇವಳ ಶೌರ್ಯ ಸಾಹಸಗಳನ್ನು ಕಂಡು ಈಕೆ ದಾನಶೂರೆ, ದಯಾಶೀಲೆ, ಧರ್ಮಿಷ್ಠೆ ಮಾತ್ರವಲ್ಲ ರಣಧೀರೆ ಎಂದು ಜನರು ಕೊಂಡಾಡುತ್ತಿದ್ದರು.

ನಾಗದೇವನ ಮರಣಾನಂತರ ಅತ್ತಿಮಬ್ಬೆಯು ವೈರಾಗ್ಯ ತಾಳಿದಳು. ತೈಲಪ ಚಕ್ರವರ್ತಿಯು ಅಣ್ಣಿಗದೇವನನ್ನು ಲಕ್ಕುಂಡಿ ಪ್ರಾಂತ್ಯಕ್ಕೆ ಸಾಮಂತನನ್ನಾಗಿ ನೇಮಿಸಿದನು. ಅತ್ತಿಮಬ್ಬೆ ಮಗನೊಂದಿಗೆ ಲಕ್ಕುಂಡಿಯಲ್ಲಿ ನೆಲೆಸಿದಳು. ಗದಗ ಜಿಲ್ಲೆಯ ಲಕ್ಕುಂಡಿಯಲ್ಲಿ ಜಿನದೇವಾಲಯ ಕಟ್ಟಿಸಿದಳು. ಇಲ್ಲಿ ಅವಳ ಶಾಸನವೂ ಇದೆ. ರನ್ನ ಕವಿಯಿಂದ 'ಅಜಿತತೀರ್ಥಂಕರ ಪುರಾಣ' ಬರೆಸಿ ಅದರ ಹಸ್ತಪ್ರತಿಗಳನ್ನು ಹಂಚಿದಳು. ತಾನು ಕಟ್ಟಿಸಿದ ಜಿನಾಲಯಗಳಿಗೆ ದತ್ತಿಗಳನ್ನು ನೀಡಿದಳು. ಹೀಗೆ ಧರ್ಮಕಾರ್ಯಗಳಲ್ಲಿ ನಿರತಳಾಗಿ ತನ್ನ ಅಂತಿಮ ದಿನಗಳಲ್ಲಿ ಉಪವಾಸ ವ್ರತಗಳನ್ನು ಕೈಗೊಂಡು ಕೀರ್ತಿಶೇಷಳಾದಳು.

ರನ್ನ ಮಹಾಕವಿಯು ಇವಳನ್ನು 'ದಾನಚಿಂತಾಮಣಿ' ಎಂದು ಹಾಡಿ ಹೊಗಳಿದ್ದಾನೆ. ತನ್ನ ಮಗಳಿಗೆ ಅತ್ತಿಮಬ್ಬೆ ಎಂದು ಹೆಸರಿಟ್ಟು ಅಭಿಮಾನ ಮೆರೆದಿದ್ದಾನೆ.

ಕರ್ನಾಟಕ ಸರ್ಕಾರವು ಅತ್ತಿಮಬ್ಬೆಯ ಸ್ಮರಣಾರ್ಥ ಉತ್ತಮ ಸಾಧನೆಗೈದ ಮಹಿಳಾ ಸಾಹಿತಿಗೆ 'ಅತ್ತಿಮಬ್ಬೆ ಪ್ರಶಸ್ತಿ' ನೀಡಿ ಗೌರವಿಸುತ್ತಾ ಬಂದಿದೆ. ಈ ದಾನಶೂರೆಯ ದಿವ್ಯಾದರ್ಶ ಅನುಪಮ, ಅನನ್ಯ.

* * * * *

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅನುಪಮ** – ಹೋಲಿಕೆ ಮೀರಿದ; ಶ್ರೇಷ್ಠ.
**ಅವಳಿ** – ಜೋಡಿ
**ಉಪವಾಸ** – ಆಹಾರ ಸ್ವೀಕರಿಸದಿರುವುದು.
**ಜಿನ** – ಜೈನ ಸನ್ಯಾಸಿ
**ದೃಷ್ಟಿ** – ನೋಟ
**ಬಂಧು** – ನೆಂಟ
**ಮಿತ್ರ** – ಗೆಳೆಯ; ಸ್ನೇಹಿತ.
**ಸಂಪನ್ನ** – ಸಜ್ಜನ; ಶ್ರೇಷ್ಠ; ಧನಿಕ.
**ಅನನ್ಯ** – ಬೇರೆಯಲ್ಲದ; ಅದ್ವಿತೀಯ.
**ಈಡೇರು** – ನೆರವೇರು
**ಕಲಿ** – ವೀರ
**ಜಿನಬಿಂಬ** – ತೀರ್ಥಂಕರರ ಪ್ರತಿಮೆ
**ಪ್ರಖ್ಯಾತ** – ಪ್ರಸಿದ್ಧ
**ಬಿಂಬ** – ಪ್ರತಿರೂಪ
**ಸನ್ನಡತೆ** – ಒಳ್ಳೆಯ ನಡವಳಿಕೆ
**ಹಸ್ತ** – ಕೈ; ಕರ.

## ಟಿಪ್ಪಣಿಗಳು :

೧. ದತ್ತಿ : ದಾನವಾಗಿ ಕೊಟ್ಟ ಭೂಮಿ, ಹಣ ಇತ್ಯಾದಿ. ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಒಂದು ಸಂಸ್ಥೆಯಲ್ಲಿ ಒಬ್ಬರ ಹೆಸರಿನಲ್ಲಿಟ್ಟ ಶಾಶ್ವತ ನಿಧಿ.

೨. ಹಸ್ತಪ್ರತಿ : ಕೈಬರಹದ ಮೂಲಕ ಬರೆದ ಪ್ರತಿ. ಕೈಬರವಣಿಗೆಯ ಮೂಲ ಪ್ರತಿ.

೩. ವೈರಾಗ್ಯ : ಆಸೆಗಳನ್ನು ತ್ಯಜಿಸಿದ ಭಾವ.

೪. ಕೀರ್ತಿಶೇಷ : ಮರಣಾನಂತರವೂ ವ್ಯಕ್ತಿಯ ಕೀರ್ತಿ ಹಾಗೂ ಹೆಸರು ಅಮರವಾಗಿ ಉಳಿಯುವುದು.

೫. ಚಿಂತಾಮಣಿ : ಬಯಸಿದುದನ್ನು ಕೊಡಬಲ್ಲ ದೇವಲೋಕದ ದಿವ್ಯರತ್ನ.

೬. ಜಿನಾಲಯ : ಜೈನಧರ್ಮದವರ ಪ್ರಾರ್ಥನಾ ಸ್ಥಳ.

## II. ಪ್ರಶ್ನೆಗಳು :

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಅತ್ತಿಮಬ್ಬೆಯ ತಂದೆ, ತಾಯಿಯ ಹೆಸರೇನು?

೨. ಅತ್ತಿಮಬ್ಬೆಯ ಹುಟ್ಟೂರು ಯಾವುದು?

೩. ಅತ್ತಿಮಬ್ಬೆಯನ್ನು ಜನರು ಏನೆಂದು ಕೊಂಡಾಡುತ್ತಿದ್ದರು?

೪. ಅತ್ತಿಮಬ್ಬೆಯ ಮೇಲಿನ ಅಭಿಮಾನವನ್ನು ರನ್ನ ಹೇಗೆ ತೋರಿದ್ದಾನೆ?

೫. ಬಾಲಕಿ ಅತ್ತಿಮಬ್ಬೆಯಲ್ಲಿದ್ದ ಗುಣಗಳಾವುವು?

೬. ಅತ್ತಿಮಬ್ಬೆ ತನ್ನ ಅಣ್ಣಂದಿರಿಂದ ಯಾವ ವಿದ್ಯೆಗಳನ್ನು ಕಲಿತಳು?

೭. ಅತ್ತಿಮಬ್ಬೆ ಪ್ರಶಸ್ತಿಯನ್ನು ಯಾರಿಗೆ ನೀಡಲಾಗುತ್ತಿದೆ?

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಅತ್ತಿಮಬ್ಬೆಯ ವಿವಾಹ ಸಂದರ್ಭದಲ್ಲಿ ಬಂಧು ಮಿತ್ರರಿಗೆ ಏನನ್ನು ಉಡುಗೊರೆಯಾಗಿ ನೀಡಲಾಯಿತು?

೨. ಅತ್ತಿಮಬ್ಬೆಯು ತನ್ನ ಬಿಡುವಿನ ವೇಳೆಯಲ್ಲಿ ಯಾವ ಕೆಲಸ ಮಾಡುತ್ತಿದ್ದಳು?

೩. ತಾಯಿಯಾಗುವ ಸಂದರ್ಭದಲ್ಲಿ ಅತ್ತಿಮಬ್ಬೆಯ ಮಹಾಬಯಕೆ ಏನಾಗಿತ್ತು?

೪. ಅತ್ತಿಮಬ್ಬೆ ತನ್ನ ಗಂಡನೊಂದಿಗೆ ರಣರಂಗದಲ್ಲಿ ಹೇಗೆ ಹೋರಾಟ ಮಾಡುತ್ತಿದ್ದಳು?

೫. ಅತ್ತಿಮಬ್ಬೆ ವಿದ್ಯಾಪೋಷಿತೆಯಾಗಿ ಮಾಡಿದ ಕಾರ್ಯಗಳೇನು?

೬. ಅತ್ತಿಮಬ್ಬೆಯು ತನ್ನ ಗಂಡನ ಮರಣಾನಂತರ ಮಾಡಿದ ಕಾರ್ಯಗಳು ಯಾವುವು?

**ಇ) 'ಅ' ಪಟ್ಟಿಯ ಅಂಶಗಳನ್ನು 'ಬ' ಪಟ್ಟಿಯ ಅಂಶಗಳೊಂದಿಗೆ ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ೧) ಆದಿಪುರಾಣವು | ಅ) ಅತ್ತಿಮಬ್ಬೆ |
| ೨) ಶಾಂತಿಪುರಾಣವು | ಆ) ಲಕ್ಕುಂಡಿ |
| ೩) ಸಾಹಸಭೀಮವಿಜಯ | ಇ) ಪೊನ್ನಕವಿ |
| ೪) ದಾನಚಿಂತಾಮಣಿ | ಈ) ಪಂಪಕವಿ |
| | ಉ) ರನ್ನಕವಿ |



**ಈ) ಬಿಟ್ಟಿರುವ ಸ್ಥಳದಲ್ಲಿ ಸರಿಯಾದ ಪದವನ್ನು ಬರೆದು, ವಾಕ್ಯವನ್ನು ಪೂರ್ಣಗೊಳಿಸಿರಿ.**

೧. ಅತ್ತಿಮಬ್ಬೆಯ ಗುರುಗಳ ಹೆಸರು ______________________.

೨. ಅತ್ತಿಮಬ್ಬೆಯ ಗಂಡನ ಹೆಸರು ______________________

೩. ರನ್ನನ ಗುರುಗಳ ಹೆಸರು ______________________

೪. ರನ್ನನಿಗೆ ______________________ ಎಂಬ ಬಿರುದು ಇತ್ತು.

೫. ಅತ್ತಿಮಬ್ಬೆಯ ಮಗನ ಹೆಸರು ______________________

೬. ರನ್ನನು ತನ್ನ ಮಗಳಿಗೆ ______________________ ಎಂದು ನಾಮಕರಣ ಮಾಡಿದನು.

## III. ಭಾಷಾಭ್ಯಾಸ :

ಅ) ಇಲ್ಲಿ ನೀಡಿರುವ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.

೧. ಸನ್ನಡತೆ : ______

೨. ಸಂಸ್ಕಾರ : ______

೩. ವಿವೇಕ : ______

೪. ವಿನಯ : ______

೫. ಅನುಪಮ : ______

ಆ) ಇಲ್ಲಿ ನೀಡಿರುವ ಪದಗಳ ಅನ್ಯಲಿಂಗ ರೂಪ ಬರೆಯಿರಿ.

೧. ಧರ್ಮಿಷ್ಠೆ – ______ ೨. ಚತುರ – ______

೩. ದಾನಶೂರ – ______ ೪. ದಯಾಶೀಲೆ – ______

೫. ಸಂಪನ್ನೆ – ______ ೬. ಕವಿ – ______

ಇ) ಇಲ್ಲಿ ನೀಡಿರುವ ಪದಗಳನ್ನು ಬಿಡಿಸಿ ಬರೆಯಿರಿ.

೧. ವಿದ್ಯಾಭ್ಯಾಸ = ______ + ______

೨. ದಿವ್ಯಾದರ್ಶ = ______ + ______

೩. ಬಿರುದಾಂಕಿತ = ______ + ______

೪. ಜಿನಾಲಯ = ______ + ______

೫. ವೀರಾವೇಶ = ______ + ______

೬. ಸಾಹಿತ್ಯಾಭಿಮಾನಿ = ______ + ______

**ಈ) ವಾಕ್ಯದಲ್ಲಿರುವ ಪದಗಳನ್ನು ಅರ್ಥಪೂರ್ಣವಾಗಿ ಜೋಡಿಸಿ ಬರೆಯಿರಿ.**

೧. ಅತ್ತಿಮಬ್ಬೆ ನೆಲೆಸಿದಳು ಲಕ್ಕುಂಡಿಯಲ್ಲಿ ಮಗನೊಂದಿಗೆ.

೨. ರಣರಂಗದಲ್ಲಿ ರಥ ಸಾರಥಿಯಾಗಿ ನಡೆಸುತ್ತಿದ್ದಳು ಅತ್ತಿಮಬ್ಬೆ.

೩. ಮರಣಾನಂತರ ನಾಗದೇವನ ವೈರಾಗ್ಯ ಅತ್ತಿಮಬ್ಬೆ ತಾಳಿದಳು.

**ಉ) ಇಲ್ಲಿ ನೀಡಿರುವ ಪದಗಳ ವಚನ ಬದಲಿಸಿ ಬರೆಯಿರಿ.**

| | | | |
|---|---|---|---|
| ೧. ಕೃತಿಗಳು | – ____________ | ೨. ದತ್ತಿ | – ____________ |
| ೩. ಮಗು | – ____________ | ೪. ಅಣ್ಣ | – ____________ |
| ೫. ವೀರ | – ____________ | ೬. ಬಾಲಕ | – ____________ |

**ಊ) ಇಲ್ಲಿ ನೀಡಿರುವ ಗಾದೆ ಮಾತುಗಳನ್ನು ವಿಸ್ತರಿಸಿ ಬರೆಯಿರಿ.**

೧. ಬೆಳೆಯುವ ಸಿರಿ ಮೊಳಕೆಯಲ್ಲಿ.

೨. ಮನೆಯೇ ಮೊದಲ ಪಾಠಶಾಲೆ.

## IV. ಚಟುವಟಿಕೆಗಳು :

೧. ಟಿ. ಸುನಂದಮ್ಮ, ಶಾಂತಾದೇವಿ ಮಾಳವಾಡ, ಕಮಲಾ ಹಂಪನಾ, ಸಾರಾ ಅಬೂಬ್ಕಕರ್, ಗೀತಾ ನಾಗಭೂಷಣ, ಬಿ.ಟಿ. ಲಲಿತಾನಾಯಕ್, ಶಶಿಕಲಾ ವೀರಯ್ಯಸ್ವಾಮಿ ಮೊದಲಾದ 'ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ' ಪುರಸ್ಕೃತರ ಭಾವ ಚಿತ್ರಗಳನ್ನು ಸಂಗ್ರಹಿಸಿ. ಇವರ ಸಾಹಿತ್ಯ ಕೃತಿಗಳನ್ನು ಪರಿಚಯಮಾಡಿಕೊಳ್ಳಿ.

೨. ಸ್ಥಳೀಯ ಸಾಹಿತ್ಯ ಪೋಷಕರ ವಿವರ ಪಡೆದು, ಅವರನ್ನು ಭೇಟಿಮಾಡಿರಿ.

* * * * *

ಪದ್ಯ – ೧೧




# ಈ ನೆಲ ಈ ಜಲ

– ಎಚ್. ಡುಂಡಿರಾಜ್

**ಪದ್ಯ ಪ್ರವೇಶ :** ಪರಿಸರದ ಉಳಿವೇ ನಮ್ಮ ಉಳಿವು. ಪರಿಸರದ ಹಾನಿಯಿಂದ ನಮ್ಮ ಬದುಕು ದುಸ್ತರವಾಗುತ್ತಿದೆ. ಹೀಗಾಗಿ ಪರಿಸರ ರಕ್ಷಣೆ ಮಾಡಬೇಕಾಗಿರುವುದು ನಮ್ಮೆಲ್ಲರ ಹೊಣೆಯಾಗಿದೆ. ಜನರಲ್ಲಿ, ಮಕ್ಕಳಲ್ಲಿ ಪರಿಸರದ ಜಾಗೃತಿಯನ್ನುಂಟುಮಾಡುವ ಕೆಲಸವನ್ನು ಅನೇಕ ಸಂಘಸಂಸ್ಥೆಗಳು ನಿರಂತರವಾಗಿ ಮಾಡುತ್ತಲೇ ಬಂದಿವೆ. ಈ ದಿಸೆಯಲ್ಲಿ ಕವಿತೆಗಳು ಮಹತ್ವದ ಪಾತ್ರವಹಿಸಿವೆ.

ಈ ನೆಲ ಈ ಜಲ ಈ ಕಾಡು
ಗೀಜಗ ಕಟ್ಟಿದ ಈ ಗೂಡು
ಇರಲಿ ಇರಲಿ ಹೀಗೆ ಪ್ರಕೃತಿ ಕೊಟ್ಟ ಕೊಡುಗೆ.

ಜುಳು ಜುಳು ಹರಿವ ಹೊಳೆಗೆ
ಕೊಳೆಯ ಬೆರೆಸೊ ಖಳರೇ
ಬಗೆ ಬಗೆ ಹೊಗೆಯನು ಉಗುಳಿ
ಮಲಿನಗೊಳಿಸದಿರಿ ಗಾಳಿ
ಸಾಕು ಇನ್ನು ಸಾಕು ಈ ತಪ್ಪ ತಿದ್ದಬೇಕು.

ಮರಗಳ ಕಡಿದು ಕಡಿದು ಎಲ್ಲೆಡೆ ಭಣ ಭಣ ಬಿಸಿಲು
ಚಿಲಿಪಿಲಿ ಉಲಿವ ಹಕ್ಕಿ
ಅಳುತಿದೆ ಬಿಕ್ಕಿ ಬಿಕ್ಕಿ
ಸಾಕು ಇನ್ನು ಸಾಕು ಹಸಿರಾಗಬೇಕು ಬದುಕು

ರಕ್ಷಿಸಬೇಕು ಬಿಡದೇ
ನಮ್ಮ ನೆಲಜಲಗಳ ನಾವು
ನಾಳಿನ ಪೀಳಿಗೆಗಾಗಿ
ಉಳಿಸಿರಿ ನಾಡಿನ ಚೆಲುವು
ಸಿರಿನಾಡ ಚೆಲುವು ಈ ಕರುನಾಡ ಚೆಲುವು.

* * * *



## ಕೃತಿಕಾರರ ಪರಿಚಯ :

**ಎಚ್. ಡುಂಡಿರಾಜ್** ಅವರು ೧೯೫೬ ರಲ್ಲಿ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹಟ್ಟಿಕುದುರುನಲ್ಲಿ ಜನಿಸಿದರು. ಎಂ.ಎಸ್ಸಿ. (ಕೃಷಿ) ಪದವೀಧರರಾದ ಇವರು ಕಾರ್ಪೊರೇಷನ್ ಬ್ಯಾಂಕಿನಲ್ಲಿ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. 'ನನ್ನ ಕವಿತೆ ನನ್ನ ಹಾಗೆ', 'ಏನಾಯಿತು', 'ಬನ್ನಿ ನಮ್ಮ ಹಾಡಿಗೆ' ಮುಂತಾದವು ಅವರ ಕವನಸಂಕಲನಗಳು. 'ನವನೀತ', 'ಪಂಚ್-ಕ-ಜಾಯ್', 'ಹನಿಕೇತನ' ಇತ್ಯಾದಿಗಳು ಹನಿಗವನ ಸಂಕಲನಗಳು. 'ಹುಡುಕಾಟ', 'ಅದ್ವಾನಪುರ', 'ಪುಕ್ಕಟ್ಟೆ ಸಲಹೆ' ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಅಲ್ಲದೆ ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ.



ಇವರಿಗೆ ಮುದ್ದಣ ಕಾವ್ಯ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿ, ಕಡೆಂಗೊಡ್ಲು ಕಾವ್ಯ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಬಿಂದುಶ್ರೀ ಪ್ರಶಸ್ತಿಗಳು ಲಭಿಸಿವೆ. ಪ್ರಸ್ತುತ 'ಈ ನೆಲ ಈ ಜಲ' ಕವನವನ್ನು ಅವರ 'ಬನ್ನಿ ನಮ್ಮ ಹಾಡಿಗೆ' ಎಂಬ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.



## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಉಲಿ** – ಧ್ವನಿ; ಕೂಗು.
**ಕಾಡು** – ಅರಣ್ಯ
**ಕೊಳೆ** – ಕಸ; ಗಲೀಜು; ಹೊಲಸು.
**ಚೆಲುವು** – ಸೊಗಸು
**ಪೀಳಿಗೆ** – ವಂಶ
**ಬದುಕು** – ಜೀವನ
**ರಕ್ಷಿಸು** – ಕಾಪಾಡು
**ಹಕ್ಕಿ** – ಪಕ್ಷಿ
**ಕಟ್ಟಿದ** – ನಿರ್ಮಿಸಿದ
**ಕೊಡುಗೆ** – ಉಡುಗೊರೆ
**ಖಳ** – ದುಷ್ಟ
**ತಿದ್ದು** – ಸರಿಪಡಿಸು
**ಪ್ರಕೃತಿ** – ನಿಸರ್ಗ
**ಬೆರೆಸು** – ಸೇರಿಸು
**ಸಿರಿ** – ಸಂಪತ್ತು

**ಗಮನಿಸಿ ತಿಳಿಯಿರಿ.**

೧. ಬದುಕು ಹಸುರಾಗಬೇಕು – ಜೀವನ ಸುಂದರವಾಗಬೇಕು.
೨. ನಾಳಿನ ಪೀಳಿಗೆ – ನಮ್ಮ ನಂತರದ ವಂಶಕ್ಕೆ ಸೇರಿದವರು.

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನಮಗೆ ಪ್ರಕೃತಿ ಕೊಟ್ಟ ಕೊಡುಗೆಗಳು ಯಾವುವು?
೨. ಹೊಳೆಯ ನೀರು ಮಲಿನಗೊಳ್ಳಲು ಕಾರಣವೇನು?
೩. ಗಾಳಿಯನ್ನು ಹೇಗೆ ಮಲಿನಗೊಳಿಸುತ್ತಿದ್ದೇವೆ?
೪. ಮರ ಕಡಿದುದರಿಂದ ಯಾವ ಹಾನಿ ಉಂಟಾಗಿದೆ?
೫. ನಾವು ಯಾರಿಗಾಗಿ ನೆಲ ಜಲಗಳನ್ನು ರಕ್ಷಿಸಬೇಕು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಪ್ರಕೃತಿಗೆ ಸಂಬಂಧಿಸಿದ ಯಾವ ತಪ್ಪುಗಳನ್ನು ತಿದ್ದಿಕೊಳ್ಳಬೇಕೆಂದು ಕವಿ ಹೇಳುತ್ತಿದ್ದಾರೆ?
೨. ಗಾಳಿ, ನೀರು ಮಲಿನವಾಗದಿರಲು ಏನು ಮಾಡಬೇಕು?
೩. ಚಿಲಿಪಿಲಿ ಉಲಿವ ಹಕ್ಕಿಗಳು ಏಕೆ ಬಿಕ್ಕಿ ಬಿಕ್ಕಿ ಅಳುತ್ತಿವೆ?
೪. ಕರುನಾಡ ಚೆಲುವನ್ನು ಹೇಗೆ ರಕ್ಷಿಸಬೇಕೆಂದು ಕವಿ ಆಶಿಸುತ್ತಾರೆ?

**ಇ) ಕೆಳಗಿನ ಪ್ರಶ್ನೆಗಳಿಗೆ ಏಳು-ಎಂಟು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಈ ನೆಲ ಈ ಜಲ ಹೀಗೇ ಇರಬೇಕಾದರೆ ಏನು ಮಾಡಬೇಕು?
೨. ನೆಲ ಜಲಗಳನ್ನು ರಕ್ಷಿಸುವುದರಿಂದ ಆಗುವ ಪ್ರಯೋಜನಗಳೇನು?

## III. ಭಾಷಾಭ್ಯಾಸ :

**ಅ) ಪದ್ಯದಲ್ಲಿ ಬಳಕೆಯಾಗಿರುವ ಈ ಪದಗಳ ವಿಶೇಷತೆಯನ್ನು ಗಮನಿಸಿರಿ.**

೧. ಜುಳುಜುಳು
೨. ಚಿಲಿಪಿಲಿ
೩. ಬಿಕ್ಕಿ ಬಿಕ್ಕಿ
೪. ಭಣ ಭಣ

ಈ ಮೇಲಿನ ಪದಗಳಲ್ಲಿ ನದಿ ಹರಿಯುವ ಶಬ್ದವನ್ನು, ಹಕ್ಕಿಗಳು ಕೂಗುವ ಧ್ವನಿಯನ್ನು, ಹಕ್ಕಿಗಳು ಅಳುವ ರೀತಿಯನ್ನು ಯಥಾವತ್ತಾಗಿ ಅನುಕರಿಸಿ ಹೇಳಲಾಗಿದೆ. ಈ ರೀತಿ ಅನುಕರಿಸಿ ಹೇಳುವ ಪದಗಳನ್ನು **'ಅನುಕರಣಾ ಅವ್ಯಯಗಳು'** ಎಂದು ಕರೆಯಲಾಗುತ್ತದೆ. ಇಂತಹ ಅನುಕರಣಾ ಶಬ್ದಗಳಿಗೆ ಉದಾಹರಣೆ ನೀಡಿರಿ.

೧. ಬಗೆ ಬಗೆ
೨. ಸಾಕು ಸಾಕು
೩. ಕಡಿದು ಕಡಿದು
೪. ಇರಲಿ ಇರಲಿ

ಈ ಪದಗಳನ್ನು ಗಮನಿಸಿ, ಇವು ಅನುಕರಣ ಶಬ್ದಗಳಲ್ಲ. ತನ್ನ ಮನದ ಇಂಗಿತವನ್ನು ಒತ್ತಿ ಹೇಳುವುದಕ್ಕಾಗಿ ಒಂದೇ ಶಬ್ದವನ್ನು ಎರಡೆರಡು ಬಾರಿ ಬಳಸಲಾಗಿದೆ. ಈ ರೀತಿಯ ಪದಗಳನ್ನು **'ದ್ವಿರುಕ್ತಿ'** ಎಂದು ಕರೆಯಲಾಗುತ್ತದೆ.

**ಆ) ಈ ಕೆಳಗಿನ ಸಂದರ್ಭಗಳಲ್ಲಿ ನೀವು ತೆಗೆದುಕೊಳ್ಳುವ ತೀರ್ಮಾನಗಳನ್ನು ಒಂದೆರಡು ವಾಕ್ಯಗಳಲ್ಲಿ ಬರೆಯಿರಿ.**

೧. ಅನಧಿಕೃತವಾಗಿ ರಸ್ತೆಯ ಅಂಚಿನ ಸಾಲುಮರಗಳನ್ನು ಕಡಿಯುತ್ತಿದ್ದಾರೆ.

________________________________________
________________________________________
________________________________________
________________________________________
________________________________________

೨. ಗೆಳೆಯನೊಬ್ಬನು ಅಲಂಕಾರಕ್ಕಾಗಿ ಹಕ್ಕಿಗೂಡುಗಳನ್ನು ಸಂಗ್ರಹಿಸುತ್ತಿದ್ದಾನೆ.

________________________________________
________________________________________
________________________________________
________________________________________
________________________________________

೩. ನಿಮ್ಮ ಊರಿನ ಕುಡಿಯುವ ನೀರಿನ ಕೆರೆಯಲ್ಲಿ ದನಕರುಗಳನ್ನು ತೊಳೆಯುತ್ತಿದ್ದಾರೆ.

________________________________________
________________________________________
________________________________________
________________________________________
________________________________________

## IV. ಚಟುವಟಿಕೆಗಳು :

೧. ನಿಮ್ಮ ಮನೆ ಹಾಗೂ ಶಾಲೆಯ ಸುತ್ತ ಮರಗಿಡಗಳಿಗೆ ನೀರೆರೆದು ಪೋಷಿಸಿರಿ.

೨. ಪರಿಸರಕ್ಕೆ ಹಾನಿ ಉಂಟುಮಾಡುತ್ತಿರುವುದು ಕಂಡು ಬಂದಲ್ಲಿ ವಿದ್ಯಾರ್ಥಿಗಳೆಲ್ಲರೂ ಸೇರಿ ತಡೆಯಲು ಪ್ರಯತ್ನಿಸಿರಿ.

೩. ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಹೇಳಿಕೆಗಳನ್ನು ಸಂಗ್ರಹಿಸಿ ಶಾಲಾ ಸೂಚನಾ ಫಲಕದಲ್ಲಿ ಪ್ರದರ್ಶಿಸಿರಿ.

## V. ಪೂರಕ ಓದು :

### ಜೀವಿತಾಳ ಪರಿಸರ ಪ್ರೀತಿ

ಆಕೆಯ ಹೆಸರು ಜೀವಿತ. ಅವಳಿಗೆ ಪಕ್ಷಿಗಳೆಂದರೆ ಬಲು ಪ್ರೀತಿ. ಅವರ ಮನೆಯ ಸುತ್ತ ಹತ್ತಾರು ಜಾತಿಯ ಪಕ್ಷಿಗಳು ನಲಿದಾಡುತ್ತಿದ್ದವು. ಪಕ್ಷಿಗಳಿಗೆ ಅನುಕೂಲವಾಗುವಂತೆ ರಟ್ಟಿನ ಪೆಟ್ಟಿಗೆಗಳನ್ನು ಮನೆಯ ಸೂರಿನ ಸುತ್ತ ಮುತ್ತ ಕಟ್ಟಿದಳು. ಇವಳ ಈ ಕೆಲಸಕ್ಕೆ ಅವಳ ಅಣ್ಣನೂ ಸಹಾಯ ಮಾಡಿದನು. ಅಮ್ಮನಿಂದ ಅಕ್ಕಿ, ರಾಗಿ, ಜೋಳ, ಗೋಧಿ ಕಾಳುಗಳನ್ನು ಪಡೆದು ಹಕ್ಕಿಗಳಿಗೆ ಕಾಣುವಂತೆ ತಟ್ಟೆಯೊಂದರಲ್ಲಿ ಇಟ್ಟಳು. ಕುಡಿಯುವುದಕ್ಕಾಗಿ ಬಟ್ಟಲಲ್ಲಿ ನೀರನ್ನೂ ಇಟ್ಟಳು. ಹಕ್ಕಿಗಳು ಕಾಳು ತಿಂದು ನೀರು ಕುಡಿಯುವುದನ್ನು ನೋಡಿ ಸಂತಸಪಟ್ಟಳು. ರಟ್ಟಿನ ಪೆಟ್ಟಿಗೆಯಲ್ಲಿ ಗುಬ್ಬಿಗಳು ಹುಲ್ಲಿನ ಗರಿಗಳನ್ನು ತಂದು ಗೂಡನ್ನು ಕಟ್ಟಿದವು. ಕೆಲವೇ ದಿನಗಳಲ್ಲಿ ಗೂಡಿನಲ್ಲಿ ಮರಿಗಳ ಚಿಲಿಪಿಲಿ ದನಿ ಕೇಳಿಸಿತು. ಜೀವಿತ ತನ್ನ ಗೆಳೆಯ ಗೆಳತಿಯರನ್ನು ಕರೆದು ಪಕ್ಷಿಗಳನ್ನು ಎಲ್ಲರಿಗೂ ತೋರಿಸಿ, ಸಂತಸದಿಂದ ವಿವರಣೆ ನೀಡುತ್ತಿದ್ದಳು. ಮನೆಯ ಸುತ್ತಮುತ್ತ ಹೂಗಿಡಗಳನ್ನು ಬೆಳೆಸಿದಳು. ಮನೆಯ ಸುತ್ತಲ ಪರಿಸರ ಹಸಿರಿನಿಂದ ಕಂಗೊಳಿಸುವಂತೆ ಮಾಡಿದಳು. ಜೀವಿತಾಳ ಪರಿಸರದ ಆಸಕ್ತಿಯನ್ನು ನೋಡಿ ಅವರ ತಂದೆ ಪ್ರೋತ್ಸಾಹಿಸಿದರು. ಮಗಳೇ ನಿಜವಾದ ಪರಿಸರ ರಕ್ಷಣೆ ಎಂದರೆ ಇದು. ಪರೀಕ್ಷೆಯಲ್ಲಿ ಪರಿಸರ ರಕ್ಷಣೆ ಕುರಿತು ಪ್ರಬಂಧ ಬರೆಯುವುದರಿಂದ ಪರಿಸರವನ್ನು ಕಾಪಾಡಿದಂತೆ ಆಗುವುದಿಲ್ಲ. ಬದಲಿಗೆ ನಿನ್ನಂತೆ ಕ್ರಿಯಾಶೀಲವಾಗಿ ಪರಿಸರ ಸಂರಕ್ಷಣೆಯಲ್ಲಿ ಎಲ್ಲರೂ ತೊಡಗಬೇಕು ಎಂದರು. ಅದಕ್ಕೆ ಜೀವಿತ ಅಪ್ಪಾಜಿ ನನಗೆ 'ಸಾಲುಮರದ ತಿಮ್ಮಕ್ಕ' ಪ್ರೇರಣೆ ಎಂದಳು.

* * * * *

ಪಾಠ – ೧೨

# ಜಾತ್ರೆಯಲ್ಲಿ ಒಂದು ಸುತ್ತು




**ಪಾಠ ಪ್ರವೇಶ :** ಮಕ್ಕಳೇ, ನೀವು ಯಾವುದಾದರೂ ಜಾತ್ರೆಯನ್ನು ನೋಡಿರುವಿರಾ? ಅಲ್ಲಿ ಕಂಡ ದೃಶ್ಯಗಳನ್ನು, ಕೊಂಡ ಆಟಿಕೆಗಳನ್ನು ನೆನಪಿಸಿಕೊಳ್ಳಿ. ಜಾತ್ರೆಯ ಸಂಭ್ರಮ, ಜನಸಾಗರ, ಅಂಗಡಿಗಳ ಸಾಲು ನೆನಪಾಗುತ್ತದಲ್ಲವೇ? ನಿಮ್ಮಂತೆ ನಿಮ್ಮ ಗೆಳೆಯರು ಕೂಡ ಜಾತ್ರೆಗೆ ಹೋಗಿರುತ್ತಾರೆ. ಅವರ ಜಾತ್ರೆಯ ಅನುಭವವನ್ನು ತಿಳಿಯೋಣವೇ?

ಪರೀಕ್ಷೆ ಮುಗಿದು ಬೇಸಿಗೆ ರಜೆ ಪ್ರಾರಂಭವಾಯಿತು. ವೇಣು ಮತ್ತು ರಶ್ಮಿ ತಾಯಿಯೊಂದಿಗೆ ಅಜ್ಜನ ಮನೆಗೆ ಹೊರಟರು. ಮಧ್ಯಾಹ್ನದ ವೇಳೆಗಾಗಲೇ ಅಜ್ಜನಮನೆ ತಲುಪಿದರು. ಸಂಜೆ ಎಲ್ಲರೂ ಊರಿನಲ್ಲಿ ನಡೆಯುತ್ತಿದ್ದ ಜಾತ್ರೆಗೆ ಹೊರಟರು.

[ಜಾತ್ರೆ ಮೈದಾನದಲ್ಲಿ ಸಾಲುಸಾಲು ಅಂಗಡಿಗಳು. ಆಟಿಕೆ ಸಾಮಾನುಗಳ, ಬಲೂನುಗಳ, ಗೊಂಬೆಗಳ, ಬಳೆ ಸರಗಳ, ಬೆಂಡು ಬತ್ತಾಸು ಸಿಹಿ ತಿಂಡಿಗಳ ಅಂಗಡಿಗಳು ಒಂದೆಡೆ. ಬಟ್ಟೆ, ಪಾತ್ರೆ, ಹೂ–ಹಣ್ಣುಗಳ ಅಂಗಡಿಗಳ ಸಾಲು ಮತ್ತೊಂದು ಕಡೆ. ಮಗದೊಂದು ಕಡೆ ಹೋಟೆಲುಗಳು, ಜೋಕಾಲಿಗಳು, ತೂಗುತೊಟ್ಟಿಲುಗಳು ಇದ್ದವು. ಎಲ್ಲಿ ನೋಡಿದರೂ ಜನಸಾಗರ. ಮಕ್ಕಳು ಅಜ್ಜನೊಡನೆ ಜಾತ್ರೆ ಅಂಗಳವನ್ನು ಪ್ರವೇಶಿಸುವರು....]

**ವೇಣು** : (ಆಶ್ಚರ್ಯದಿಂದ) ಅಬ್ಬಾ ! ಅಜ್ಜಾ, ಇಲ್ಲಿ ಎಷ್ಟೊಂದು ಅಂಗಡಿಗಳಿವೆಯಲ್ಲಾ! ಪ್ರತಿದಿನವೂ ಹೀಗೆ ಇರುತ್ತವೆಯೇ?

**ಅಜ್ಜ** : ಇಲ್ಲ ವೇಣು.... ಬೇರೆ ದಿನಗಳಲ್ಲಿ ಇಷ್ಟೊಂದು ಅಂಗಡಿಗಳು ಇರುವುದಿಲ್ಲ. ಜಾತ್ರೆಗೆಂದು ವಿಶೇಷವಾಗಿ ಹಾಕಿರುತ್ತಾರೆ.

**ರಶ್ಮಿ** : ಅಜ್ಜ, ಜಾತ್ರೆಯಲ್ಲೇಕೆ ಇಷ್ಟೊಂದು ಅಂಗಡಿಗಳು?

**ಅಜ್ಜ** : ರಶ್ಮಿ, ಜಾತ್ರೆಗೆ ಬಹಳಷ್ಟು ಜನ ಬರುತ್ತಾರೆ ಅಲ್ಲವಾ. ಬಂದವರು ತಮಗೆ ಬೇಕಾದುದನ್ನು ಕೊಂಡುಕೊಳ್ಳಲು ಅನುಕೂಲವಾಗಲೆಂದು ದೂರದ ಊರುಗಳಿಂದ ವ್ಯಾಪಾರಸ್ಥರು ಬರುತ್ತಾರೆ. ಅಲ್ಲದೆ ಮಾರಾಟಗಾರರಿಗೂ ಒಳ್ಳೆಯ ಅವಕಾಶವಲ್ಲವೇ.

**ವೇಣು** : ಈ ಜಾತ್ರೆ ಎಷ್ಟು ದಿನ ನಡೆಯುತ್ತದೆ?

**ಅಜ್ಜ** : ರಥ ಎಳೆಯುವುದು ಕೇವಲ ಒಂದು ದಿನ ಮಾತ್ರ. ಆದರೆ ಜನರ ಓಡಾಟ ಎರಡು ಮೂರು ದಿನಗಳವರೆಗೂ ಇರುತ್ತದೆ. ಬನ್ನಿ ಅಂಗಡಿ ಬೀದಿಗಳನ್ನು ಸುತ್ತಿಬರೋಣ.

[ಎಲ್ಲರೂ ಅಂಗಡಿ ಬೀದಿಯಲ್ಲಿ ಸುತ್ತಾಡಿ ರಥಬೀದಿಗೆ ಬಂದರು. ವೇಣುವಿನ ಗೆಳೆಯ ಇರ್ಫಾನ್ ತನ್ನ ತಂದೆ ತಾಯಿಯೊಂದಿಗೆ ಎದುರಾದನು. ವೇಣುವನ್ನು ನೋಡುತ್ತಲೇ ಇರ್ಫಾನ್ ಪ್ರೀತಿಯಿಂದ ಅಪ್ಪಿಕೊಂಡ.]

**ವೇಣು** : ಇರ್ಫಾನ್, ಹೇಗಿದ್ದೀಯಾ? ನಿಮ್ಮನ್ನು ಇಲ್ಲಿ ನೋಡಿ ತುಂಬಾ ಸಂತೋಷವಾಯ್ತು.

**ಇರ್ಫಾನ್** : ಚೆನ್ನಾಗಿದ್ದೇವೆ, ಇದು ನಮ್ಮೂರ ಜಾತ್ರೆ. ಇಲ್ಲಿಯ ರಥವನ್ನು ನಿರ್ಮಿಸಿದವರು ಯಾರು ಗೊತ್ತಾ? ನಮ್ಮ ತಂದೆ ಕಣೋ! ಜೊತೆಗೆ ಅವರ ಗೆಳೆಯರಾದ ರಮೇಶ್, ಜಾರ್ಜ್, ಮಹಮದ್, ವಿನ್ಸಂಟ್, ಶಂಕರಪ್ಪ ಇತರರೂ ಸೇರಿ ರಥ ನಿರ್ಮಿಸಿದ್ದಾರೆ.

**ವೇಣು** : ಹೌದಾ? ರಥದ ಜೋಡಣೆ, ಅದರ ಅಲಂಕಾರ ತುಂಬಾ ಸೊಗಸಾಗಿದೆ.

**ಇರ್ಫಾನ್** : ಹೌದು, ಇದೆಲ್ಲಾ ಒಂದು ದಿನದಲ್ಲಿ ಮಾಡಿದ್ದಲ್ಲ, ಹಲವು ದಿನಗಳಿಂದ ಎಲ್ಲರೂ ಸೇರಿ ಮಾಡಿರುವ ಸಿದ್ಧತೆ.

**ವೇಣು** : ಎಂತಹ ಕುಶಲತೆ, ತುಂಬಾ ಸೊಗಸಾಗಿದೆ.

[ಅಷ್ಟರಲ್ಲಿ ಚರ್ಮವಾದ್ಯದ ಶಬ್ದ ಎಲ್ಲರ ಗಮನ ಸೆಳೆಯಿತು. ಮಕ್ಕಳು ಕುತೂಹಲಗೊಂಡರು.]





**ರಶ್ಮಿ** : ಅಜ್ಜಾ, ಅದೇನು ಶಬ್ದ?

**ಅಜ್ಜ** : ಜನರ ಗಮನ ಸೆಳೆಯಲು ದೊಂಬರಾಟದವರು ನುಡಿಸುತ್ತಿರುವ ಚರ್ಮವಾದ್ಯ.

**ರಶ್ಮಿ** : ದೊಂಬರಾಟವೇ! ಹಾಗೆಂದರೇನು? ಅದೆಂತಹ ಆಟ?

**ಅಜ್ಜ** : ಆಟದ ಬಗ್ಗೆ ತಿಳಿಬೇಕಾ? ಹಾಗಿದ್ದರೆ ಬನ್ನಿ ಅಲ್ಲಿಗೇ ಹೋಗೋಣ.

[ಎಲ್ಲರೂ ದೊಂಬರಾಟ ನೋಡಲು ಹೋದರು. ಸುತ್ತಲೂ ಜನರ ಗುಂಪು. ನಡುವೆ ತಂತಿಯ ಮೇಲೆ ಬಾಲಕಿ ನಡೆಯುತ್ತಿದ್ದಾಳೆ.]

**ವೇಣು** : ವ್ಹಾ! ಇರ್ಫಾನ್ ನೋಡಲ್ಲಿ, ಆ ಹುಡುಗಿ ತಂತಿ ಮೇಲೆ ಹೇಗೆ ನಡೀತಿದ್ದಾಳೆ?





**ಇರ್ಫಾನ್** : ಹೌದು, ಅವಳ ಧೈರ್ಯ, ಸಾಹಸವನ್ನು ಮೆಚ್ಚಲೇಬೇಕು.

**ರಶ್ಮಿ** : ಅವಳು, ಯಾವ ಆಧಾರವೂ ಇಲ್ಲದೆ ಹೇಗೆ ನಡೆಯುತ್ತಿದ್ದಾಳೆ ನೋಡು.

**ವೇಣು** : ಕೋಲಿನ ಸಹಾಯದಿಂದ ದೇಹದ ಸಮತೋಲನ ಕಾಯ್ದು ಎಚ್ಚರಿಕೆಯಿಂದ ನಡೆಯುತ್ತಿದ್ದಾಳೆ. ಇದಕ್ಕೆ ಧೈರ್ಯ ಮತ್ತು ನಿರಂತರ ಅಭ್ಯಾಸ ಇರಬೇಕು ಅಲ್ಲವೇ....ಅಜ್ಜ.

**ಅಜ್ಜ** : ಹೌದು. ನೀನು ಹೇಳಿದ್ದು ಸರಿ.

ರಶ್ಮಿ : ಅಜ್ಜಾ, ಈ ರೀತಿ ಚಿಕ್ಕ ಮಕ್ಕಳನ್ನು ದುಡಿಸುವುದು ತಪ್ಪಲ್ಲವೇ? ಅಲ್ದೇ... ಅವಳೂ ನಮ್ಮಂತೆ ಶಾಲೆಗೆ ಹೋಗಬೇಕಲ್ಲವೇ?

ಅಜ್ಜ : ಹೌದು, ಅದಕ್ಕೇ ಮಕ್ಕಳ ಶಿಕ್ಷಣ ಮತ್ತು ಹಕ್ಕಿನ ಕಾಯ್ದೆ ಜಾರಿಗೆ ಬಂದಿರೋದು. ಅಷ್ಟೇ ಅಲ್ಲ ಹಿಂದೆ ಈ ಆಟಗಳಲ್ಲಿ ಪ್ರಾಣಿಗಳನ್ನೂ ಬಳಸುತ್ತಿದ್ದರು. ಈಗ ಪ್ರಾಣಿಗಳನ್ನು ಬಳಸಬಾರದೆಂಬ ಕಾನೂನು ಇದೆ.

ವೇಣು : ಅಜ್ಜ, ಆ ಹುಡುಗಿಯನ್ನು ಶಾಲೆಗೆ ಸೇರಿಸುವಂತೆ ಅವಳ ತಂದೆಗೆ ಹೇಳೋಣ ಬನ್ನಿ...

[ಎಲ್ಲರೂ ದೊಂಬರಾಟದವನ ಬಳಿ ಹೋಗಿ ಹುಡುಗಿಯನ್ನು ಶಾಲೆಗೆ ಸೇರಿಸುವಂತೆ ಕೇಳಿಕೊಳ್ಳುತ್ತಾರೆ. ದೊಂಬರಾಟದವನು ಮಕ್ಕಳ ಮಾತುಗಳಿಗೆ ಮನಸೋತು, ಮಗಳನ್ನು ಶಾಲೆಗೆ ಸೇರಿಸಲು ಒಪ್ಪುತ್ತಾನೆ. ಮಕ್ಕಳಿಗೆ ಸಂತೋಷವಾಗುತ್ತದೆ.]

ರಶ್ಮಿ : ಅಜ್ಜ, ಈಗ ರಥ ನೋಡಲು ಹೋಗೋಣವೇ?

ಅಜ್ಜ : ಹೋಗೋಣ, ಈಗ ಏನಾದ್ರೂ ತಿಂತೀರ?

ವೇಣು : ಬೇಡ ಅಜ್ಜಾ. ತೆರೆದಿಟ್ಟ ತಿಂಡಿಗಳನ್ನು ತಿನ್ನಬಾರದು. ಅವುಗಳ ಮೇಲೆ ಧೂಳು, ಕ್ರಿಮಿಕೀಟಗಳು ಕುಳಿತಿರುತ್ತವೆ.

ರಶ್ಮಿ : ವೇಣು ಹೇಳಿದ್ದು ಸರಿ, ಇದನ್ನ ತಿಂದ್ರೆ ವಾಂತಿ ಭೇದಿ ಬರುತ್ತಂತೆ. ಹಾಗಂತ ನಮ್ಮ ಟೀಚರ್ ಹೇಳಿದ್ರು.

ಅಜ್ಜ : ಹೌದೇ? ಹಾಗಿದ್ರೆ ತೆರೆದಿಟ್ಟ ತಿಂಡಿ ತಿನ್ನುವುದು ಬೇಡ ಬನ್ನಿ.... ಈಗ ರಥದ ಬಳಿ ಹೋಗೋಣ್ವೇ?

[ಎಲ್ಲರೂ ರಥದ ಬಳಿಗೆ ಹೊರಟರು. ಅಲ್ಲಲ್ಲಿ ನಿರ್ಮಿಸಿದ್ದ ವೇದಿಕೆಗಳನ್ನು ಕಂಡರು.]

ರಶ್ಮಿ : ಅಜ್ಜಾ... ಆ ವೇದಿಕೆಗಳು ಏಕೆ?

ಅಜ್ಜ : ರಥವನ್ನು ಎಳೆದ ನಂತರ ಅಲ್ಲಿ ನಾಟಕ, ಯಕ್ಷಗಾನ, ಬಯಲಾಟ, ನೃತ್ಯ ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ. ಮಕ್ಕಳೇ, ಅಲ್ಲಿ ನೋಡಿ ರಥ ಎಳೆಯುತ್ತಿದ್ದಾರೆ.

[ಎಲ್ಲರೂ ರಥದ ಸನಿಹಕ್ಕೆ ಬಂದರು. ಜನರು ಭಕ್ತಿ ಭಾವದಿಂದ ಘೋಷಣೆಗಳನ್ನು ಕೂಗುತ್ತಾ ರಥವನ್ನು ಎಳೆಯುತ್ತಿದ್ದಾರೆ. ನೆರೆದ ಸಮೂಹದ ಹರ್ಷೋದ್ಗಾರ ಮುಗಿಲು ಮುಟ್ಟಿತ್ತು. ಎತ್ತ ನೋಡಿದರೂ ಜನವೋ ಜನ. ರಥದ ಮುಂದೆ ಕಲಾ ತಂಡಗಳ ಮೆರವಣಿಗೆ ಸಾಗಿತ್ತು.]

**ವೇಣು** : ರಥದ ಮುಂದೆ ಸಾಗುತ್ತಿರುವ ವಿವಿಧ ವೇಷಧಾರಿಗಳು ಯಾರು?

**ಅಜ್ಜ** : ನೋಡಿ ಅಲ್ಲಿ ರಥದ ಮುಂದೆ ನಂದಿಧ್ವಜ, ಕಂಸಾಳೆ, ವೀರಗಾಸೆ, ಡೊಳ್ಳು ಕುಣಿತ, ಕೋಲಾಟ, ಹಾಲಕ್ಕಿ ಕುಣಿತ ಮೊದಲಾದ ಜಾನಪದ ಕಲಾವಿದರು ನರ್ತಿಸುತ್ತಾ ಸಾಗುತ್ತಿದ್ದಾರೆ. ಜೊತೆಗೆ ಬ್ಯಾಂಡ್, ಓಲಗ, ತಮಟೆ, ಕಹಳೆವಾದಕರು ಸಾಗುತ್ತಿದ್ದಾರೆ. ಚಂಡೆಧ್ವನಿಗೆ ಯಕ್ಷಗಾನ ವೇಷಧಾರಿಗಳು ಕುಣಿಯುತ್ತಾ ಸಾಗುತ್ತಿದ್ದಾರೆ.

[ಎಂದು ಅಜ್ಜ ಪರಿಚಯಿಸಿದರು. ಮಕ್ಕಳು ಎಲ್ಲವನ್ನು ಸಂತಸದಿಂದ ವೀಕ್ಷಿಸಿದರು. ನಂತರ ಮನೆಗೆ ಹಿಂತಿರುಗಿದರು.]

* * * *

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಆಕರ್ಷಿಸು** – ಸೆಳೆ
**ಕುಶಲತೆ** – ನಿಪುಣತೆ
**ಜಾತ್ರೆ** – ರಥೋತ್ಸವಕ್ಕೆ ಜನ ಸೇರುವುದು
**ನಿರ್ಮಿಸು** – ತಯಾರಿಸು
**ಸನಿಹ** – ಹತ್ತಿರ
**ಸೊಗಸು** – ಚೆಲುವು
**ಕಾಯ್ದೆ** – ಕಾನೂನು; ಕಟ್ಟಳೆ; ನಿಯಮ.
**ಚರ್ಮವಾದ್ಯ** –ಚರ್ಮದಿಂದ ಮಾಡಿದ ವಾದ್ಯ.
**ನಿರಂತರ** – ಸದಾ; ಯಾವಾಗಲೂ.
**ಬೆಂಡು ಬತ್ತಾಸು** – ಒಂದು ಬಗೆಯ ಸಿಹಿತಿಂಡಿ.
**ಸಮೂಹ** – ಗುಂಪು
**ಹರ್ಷೋದ್ಗಾರ** – ಸಂತೋಷದ ಧ್ವನಿ

### ಟಿಪ್ಪಣಿಗಳು :

೧. **ನಂದಿಧ್ವಜ** – ಹದಿನಾರರಿಂದ ಹದಿನೆಂಟು ಮೊಳ ಎತ್ತರವಿರುವ ಬಿದುರಿನ ಬೊಂಬಿಗೆ ಹಿತ್ತಾಳೆ ಬಿರುಡೆಗಳನ್ನು ಜೋಡಿಸಿರುತ್ತಾರೆ. ಏಳೆಂಟು ಅಡಿ ಎತ್ತರದಲ್ಲಿ ಸಣ್ಣ ಆಕೃತಿಯ ನಂದಿ ವಿಗ್ರಹವಿರುತ್ತದೆ. ಕಂಬದ ತುದಿಗೆ ರೇಷ್ಮೆ ಧ್ವಜವನ್ನು ಕಟ್ಟಿರುತ್ತಾರೆ.

೨. **ವೀರಗಾಸೆ** – ಶೈವ ಸಂಪ್ರದಾಯಕ್ಕೆ ಸೇರಿದ ಒಂದು ಜಾನಪದ ಕಲೆ.

೩. **ಯಕ್ಷಗಾನ** – ವಿಶಿಷ್ಟವಾದ ನೃತ್ಯ, ಹಾಡುಗಾರಿಕೆ, ಮಾತುಗಾರಿಕೆ ಹಾಗೂ ವೇಷಭೂಷಣಗಳನ್ನು ಒಳಗೊಂಡ ಒಂದು ಶಾಸ್ತ್ರೀಯ ಕಲೆ. ಇದು ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ.

೪. **ಬಯಲಾಟ** – ಕರ್ನಾಟಕದ ಜನಪದ ಕಲೆಗಳಲ್ಲಿ ಅತ್ಯಂತ ವೈವಿಧ್ಯತೆಗಳಿಂದ ಕೂಡಿದ ಪ್ರಾಚೀನ ಗಂಡುಕಲೆ. ಇದು ಪೌರಾಣಿಕ ಕಥೆಗಳನ್ನು ಆಧರಿಸಿ ರಾತ್ರಿಯೆಲ್ಲಾ ಪ್ರದರ್ಶನಗೊಳ್ಳುತ್ತದೆ.

೫. **ಕಂಸಾಳೆ** – ಮಲೆಮಹದೇಶ್ವರನ ಭಕ್ತರಾದ ದೇವರ ಗುಡ್ಡರು ಬಳಸುವ ವಿಶಿಷ್ಟವಾದ ವಾದ್ಯ.

೬. **ಹಾಲಕ್ಕಿ ಕುಣಿತ** – ಇದೊಂದು ಸುಗ್ಗಿ ಹಬ್ಬ. ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚು ಪ್ರಚಲಿತದಲ್ಲಿದೆ.

೭. **ದೊಂಬರಾಟ** – ದೈಹಿಕ ವ್ಯಾಯಾಮದ ಚಮತ್ಕಾರವನ್ನು ಪ್ರದರ್ಶಿಸುವ ಒಂದು ಜಾನಪದ ಕಲೆ. ಇದನ್ನು ನಡೆಸುವವರು ಬಹುತೇಕ ಅಲೆಮಾರಿಗಳೇ ಆಗಿರುತ್ತಾರೆ.

## II. ಪ್ರಶ್ನೆಗಳು :



### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಜಾತ್ರೆಯಲ್ಲಿನ ಅಂಗಡಿಗಳನ್ನು ನೋಡಿ ವೇಣು ಏನೆಂದು ಆಶ್ಚರ್ಯ ವ್ಯಕ್ತಪಡಿಸಿದನು?
೨. ದೊಂಬರಾಟದ ಹುಡುಗಿ ಯಾವ ಸಾಹಸ ಮಾಡುತ್ತಿದ್ದಳು?
೩. ದೊಂಬರಾಟದ ಹುಡುಗಿಯನ್ನು ಕಂಡ ರಶ್ಮಿಗೆ ಕಾಡಿದ ಪ್ರಶ್ನೆಗಳೇನು?
೪. ಅಜ್ಜನು ವೇದಿಕೆ ಮೇಲೆ ಯಾವ ಯಾವ ಕಾರ್ಯಕ್ರಮಗಳು ನಡೆಯುತ್ತವೆಂದು ಹೇಳಿದನು?
೫. ಜಾತ್ರೆಯಲ್ಲಿ ತೆರೆದಿಟ್ಟ ಪದಾರ್ಥಗಳನ್ನು ತಿನ್ನಬಾರದು ಏಕೆ?

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಜಾತ್ರೆಯಲ್ಲಿ ಯಾವ ಯಾವ ಅಂಗಡಿಗಳು ಇದ್ದವು?
೨. ಜಾತ್ರೆಯಲ್ಲಿ ಬಹಳಷ್ಟು ಅಂಗಡಿಗಳು ಇರುತ್ತವೆ ಏಕೆ?
೩. ರಥದ ನಿರ್ಮಾಣದ ಬಗ್ಗೆ ಇರ್ಫಾನ್ ಏನೆಂದು ಹೇಳಿದನು?
೪. ಅಜ್ಜನು ಶಿಕ್ಷಣ ಮತ್ತು ಪ್ರಾಣಿಗಳಿಗೆ ಸಂಬಂಧಿಸಿದಂತೆ ಮಕ್ಕಳಿಗೆ ಏನೆಂದು ಹೇಳಿದನು?
೫. ರಥದ ಮುಂದೆ ಸಾಗಿದ ಕಲಾ ತಂಡಗಳು ಯಾವುವು?

ಇ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು ತಿಳಿಸಿರಿ.

೧. "ಜಾತ್ರೆಯಲ್ಲೇಕೆ ಇಷ್ಟೊಂದು ಅಂಗಡಿಗಳು."

೨. "ರಥದ ಮುಂದೆ ಸಾಗುತ್ತಿರುವ ವಿವಿಧ ವೇಷಧಾರಿಗಳು ಯಾರು?"

೩. "ಹೌದು, ಅವಳ ಧೈರ್ಯ, ಸಾಹಸವನ್ನು ಮೆಚ್ಚಲೇಬೇಕು."

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಆಕರ್ಷಿಸು :______________________

೨. ಕುಶಲತೆ :______________________

೩. ಸೊಗಸು :______________________

೪. ವೀಕ್ಷಿಸು :______________________

೫. ಕುತೂಹಲ :______________________



ಆ) 'ಅ' ಪಟ್ಟಿಯಲ್ಲಿರುವ ಅಂಶಗಳಿಗೆ 'ಬ' ಪಟ್ಟಿಯ ಅಂಶಗಳನ್ನು ಹೊಂದಿಸಿ ಬರೆಯಿರಿ.

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ೧) ಅಜ್ಜಿ | ಅ) ಹುಡುಗ |
| ೨) ತಾಯಿ | ಆ) ಅಜ್ಜ |
| ೩) ಹುಡುಗಿ | ಇ) ಅಕ್ಕ |
| ೪) ಬಾಲಕಿ | ಈ) ಹೆಂಗಸು |
| ೫) ಗಂಡಸು | ಉ) ಮಾವ |
| ೬) ಅತ್ತೆ | ಊ) ತಂದೆ |
| ೭) ಅಣ್ಣ | ಋ) ಬಾಲಕ |

**ಇ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ಅನುಕೂಲ x ______ ೨. ಸಂತೋಷ x ______

೩. ಧೈರ್ಯ x ______ ೪. ಆಧಾರ x ______

೫. ಸಮತೋಲನ x ______ ೬. ಸನಿಹ x ______

**ಈ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ಓಡಾಟ = ______ + ______

೨. ಬಯಲಾಟ = ______ + ______

೩. ಹರ್ಷೋದ್ಗಾರ = ______ + ______

೪. ದೊಂಬರಾಟ = ______ + ______

## IV. ಚಟುವಟಿಕೆಗಳು :

೧. ನಿಮ್ಮ ಊರಿನ ಜಾನಪದ ಕಲೆಗಳು ಹಾಗೂ ಅವುಗಳ ವಿಶೇಷತೆಗಳನ್ನು ಕೇಳಿ ತಿಳಿಯಿರಿ.
೨. ನಿಮ್ಮ ಊರಿನ ಜಾತ್ರೆ ಅಥವಾ ಉತ್ಸವಗಳಲ್ಲಿ ಬಳಸುವ ವಾದ್ಯ ಪರಿಕರಗಳ ಮಾಹಿತಿ ಸಂಗ್ರಹಿಸಿ.
೩. ನಿಮ್ಮೂರಿನ ಜಾತ್ರೆಯ ವಿಶೇಷತೆಗಳನ್ನು ವಿವರಿಸಿ ಗೆಳೆಯನಿಗೆ ಒಂದು ಪತ್ರ ಬರೆಯಿರಿ.



## V. ಪೂರಕ ಓದು :

### ದೊಂಬರಾಟ

ನೆರೆಯಿತಿದೋ ಜನರ ದೊಂಬಿ
ದೊಂಬರಾಟ ನೋಡಲು
ಬೇಸರಿಕೆಯ ದೂಡಲು
ನೋಡಿ ಕಾಸ ನೀಡಲು
ಸ್ವಲ್ಪ ಸುಖಿಸಿ ಮತ್ತೆ ಹೆಗಲ
ಬಾಳ ನೊಗಕೆ ಹೂಡಲು ॥ ೧ ॥

ಸರಸರಸರ ಗಣೆಯನೇರಿ
ಮಿಣಿಯ ಮೇಲೆ ನಡೆದಳು
ಡೊಂಬಿತಿ ತುಸು ತಡೆದಳು
ಕೋಲನೊಂದ ಹಿಡಿದಳು
ಕೋಲನತ್ತ ಇತ್ತ ಚಾಚಿ
ಮಣಿದು ಕುಣಿದು ನಡೆದಳು ॥ ೨ ॥

ಜೋಲಿ ಹೋಗದಂತೆ ಕೋಲ
ಬಳಸುವವಳ ಚಾತುರ
ಮಣಿ ಮೇಗಣ ಪಾತರ
ನೋಡುವವರ ಕಾತರ
ಡೊಂಬನಿಗೋ ಬೇಗ ಮುಗಿಸಿ
ಕಾಸು ಪಡೆವ ಆತುರ ॥ ೩ ॥

ಮೂಳೆಗಳೇ ಇಲ್ಲವೇನೋ
ಇವಳ ಬಿಲ್ಲು – ಮೈಯಲಿ
ಇವಳ ಬಳ್ಳಿ – ಕೈಯಲಿ
ಇವಳೇನೇ ಗೆಯ್ಯಲಿ ॥ ೪ ॥

ಮೂಕರಾಗಿ ನೋಡುತಿಹರು
ನೆರೆದ ಜನರು ಬಯಲಲಿ
ಹಳ್ಳಿಯ ಸರ್ಕಸ್ಸು ಇದನು
ಜನರು ನೋಡಿ ನಲಿದರು ॥ ೫ ॥

ಕೈಯ ತಟ್ಟಿ ಕಲೆದರು
ಆಟವಿದಕೆ ಒಲಿದರು
ಕಾಸನಿತ್ತು ಕಜ್ಜ ಕರೆಯೆ
ಮನೆಗಳತ್ತ ಸುಳಿದರು. ॥ ೬ ॥

–ಸಿದ್ದಯ್ಯ ಪುರಾಣಿಕ

* * * *

ಪಾಠ – ೧೩

# ಅಂತಿಮ ವಿದಾಯ

– ಗಿರೀಶ್ ತಾಳಿಕಟ್ಟೆ




**ಪಾಠ ಪ್ರವೇಶ :** 'ವೈದ್ಯೋ ನಾರಾಯಣೋ ಹರಿಃ' ಎನ್ನುವ ಮಾತನ್ನು ನೀವು ಕೇಳಿದ್ದೀರಿ. ಅಂದರೆ ವೈದ್ಯ ಮಾನವ ರೂಪದ ದೇವರು. ಆತ ದುಃಖದಲ್ಲಿರುವವರ ಕಣ್ಣೀರನ್ನು ಒರೆಸುತ್ತಾನೆ. ತನಗೆ ಎಷ್ಟೇ ಕಷ್ಟಗಳಿದ್ದರೂ ದುಃಖವಿದ್ದರೂ ನೋವಿದ್ದರೂ ಅದನ್ನು ಲೆಕ್ಕಿಸದೆ ಇತರರ ನೋವನ್ನು ತನ್ನ ನೋವೆಂದು ಭಾವಿಸಿ ಕರ್ತವ್ಯ ನಿರ್ವಹಿಸುತ್ತಾನೆ. ಅಂತಹ ವೈದ್ಯರ ಮನ ಮಿಡಿಯುವ ಸಂಗತಿಯೊಂದನ್ನು ನೀವು ಓದಲೇಬೇಕು.



ಆ ವೈದ್ಯನ ನಡಿಗೆಯಲ್ಲಿ ಧಾವಂತವಿತ್ತು. ರೋಗಿಯೊಬ್ಬನನ್ನು ಉಳಿಸಲು ತನ್ನಿಂದಾಗಿ ತಡವಾಗುತ್ತಿದೆಯಲ್ಲಾ ಎಂಬ ತಳಮಳವಿತ್ತು. ನರ್ಸ್‌ಳಿಂದ ಫೋನ್ ಬರುತ್ತಿದ್ದಂತೆಯೇ ಆಸ್ಪತ್ರೆಗೆ ದೌಡಾಯಿಸಿದ್ದ. ತನ್ನ ರೂಮಿಗೆ ಹೋದವನೇ ಶಸ್ತ್ರಚಿಕಿತ್ಸೆಯ ಸಮವಸ್ತ್ರ ಧರಿಸಿ ಆಪರೇಷನ್ ಥಿಯೇಟರ್‌ನತ್ತ ಹೆಜ್ಜೆ ಹಾಕಿದ್ದ.

ಕೊಠಡಿಯ ಮುಂದೆ ಒಬ್ಬ ತಂದೆ ಶತಪಥ ಹೆಜ್ಜೆ ಹಾಕುತ್ತಿದ್ದಾನೆ. ಒಳಗೆ ಮಲಗಿರುವ ತನ್ನ ಮಗನಿಗೆ ಏನಾಗಿ ಬಿಡುತ್ತೋ, ಮತ್ತೆ ಆತನನ್ನು ಜೀವಂತವಾಗಿ ನೋಡುತ್ತೇನೋ ಇಲ್ಲವೋ ಎಂಬ ಆತಂಕ ಅವನನ್ನು ಕಿತ್ತು ತಿನ್ನುತ್ತಿದೆ. ಮುಖದಲ್ಲಿ ಅಸಹನೆ ತಾಂಡವವಾಡುತ್ತಿದೆ.

ಆಪರೇಷನ್ ಥಿಯೇಟರ್‌ನತ್ತ ದೌಡಾಯಿಸುತ್ತಿರುವ ವೈದ್ಯನನ್ನು ಕಾಣುತ್ತಿದ್ದಂತೆಯೇ ಅವನೆಲ್ಲಾ ಅಸಹನೆಯ ಕಟ್ಟೆಯೊಡೆಯಿತು. "ಇಲ್ಲಿಗೆ ಬರುವುದಕ್ಕೆ ನಿಮಗೆ ಇಷ್ಟೊತ್ತು ಬೇಕಾಯಿತೆ? ನನ್ನ ಮಗನ ಜೀವ ಅಪಾಯದಲ್ಲಿದೆಯೆಂಬುದು ನಿಮಗೆ ಗೊತ್ತಿಲ್ಲವೇ? ನಿಮಗೆ ಕಿಂಚಿತ್ತಾದರೂ ಜವಾಬ್ದಾರಿ ಎನ್ನುವುದಿಲ್ಲವೇ?" ತನ್ನೆಲ್ಲಾ ಆಕ್ರೋಶಕ್ಕೆ ಮಾತಿನ ರೂಪ ಕೊಟ್ಟು ವೈದ್ಯನ ಮೇಲೆ ಹರಿಹಾಯ್ದ.

"ದಯವಿಟ್ಟು ಕ್ಷಮಿಸಪ್ಪ. ನಾನು ಆಸ್ಪತ್ರೆಯಲ್ಲಿ ಇರಲಿಲ್ಲ. ನನಗೆ ಫೋನ್ ಬರುತ್ತಿದ್ದಂತೆಯೇ ಹೊರಟು ಬಂದಿದ್ದೇನೆ. ದಯಮಾಡಿ ನೀನೀಗ ಸ್ವಲ್ಪ ಶಾಂತನಾಗು. ನನ್ನ ಕೆಲಸ ಮಾಡಲು ಅನುವು ಮಾಡಿಕೊಡು. ಈಗಾಗಲೇ ತಡವಾಗಿ ಹೋಗಿದೆ" ಕ್ಷಮೆಯ ನಗುವಿನೊಂದಿಗೆ ವೈದ್ಯ ವಿನಂತಿಸಿಕೊಂಡ.

"ಶಾಂತನಾಗೋದ? ಒಂದೊಮ್ಮೆ ನಿನ್ನ ಮಗ ಇದೇ ಆಪರೇಷನ್ ಕೊಠಡಿಯಲ್ಲಿ ಈ ಪರಿಸ್ಥಿತಿಯಲ್ಲಿ ಮಲಗಿದ್ದರೆ ನೀನು ಶಾಂತನಾಗಿರುತ್ತಿದ್ದೆಯಾ? ವೈದ್ಯ ಬರುವುದು ತಡವಾಗಿ ನಿನ್ನ ಮಗ ಸತ್ತು ಹೋದರೆ ನೀನೇನು ಮಾಡುತ್ತಿದ್ದೆ?" ತಂದೆಯ ಆಕ್ರೋಶಕ್ಕೆ ಕೊನೆಯಿದ್ದಂತೆ ಕಾಣಲಿಲ್ಲ.

ವೈದ್ಯ ಮತ್ತದೇ ಕ್ಷಮೆಯಾಚಿತ ನಗುವಿನೊಂದಿಗೆ ಉತ್ತರಿಸಿದ "ಒಬ್ಬ ವೈದ್ಯನಾಗಿ ನಾನು

ಏನು ಮಾಡಬಲ್ಲೆನೋ ಅದನ್ನು ಪ್ರಾಮಾಣಿಕವಾಗಿ ಮಾಡುತ್ತೇನೆ. ನಿನ್ನ ಮಗನನ್ನು ಉಳಿಸಲು ನನ್ನೆಲ್ಲಾ ಸಾಮರ್ಥ್ಯವನ್ನು ಪಣಕ್ಕಿಡುತ್ತೇನೆ. ಆದರೂ ನಮ್ಮನ್ನೆಲ್ಲಾ ಮೀರಿದ ಶಕ್ತಿಯ ಮುಂದೆ ನಮ್ಮ ಆಟವೇನೂ ನಡೆಯದು. ವೈದ್ಯರಾದವರು ಸಾವನ್ನು ಮುಂದೂಡಬಹುದೇ ವಿನಾ ಸಾವಿನಿಂದ ಸಂಪೂರ್ಣವಾಗಿ ಬಚಾವು ಮಾಡುವ ಶಕ್ತಿ ನಮಗೂ ಇಲ್ಲ. ಈಗ ಹೋಗಿ ಆ ದೇವರ ಬಳಿ ನಿನ್ನ ಮಗನನ್ನು ಉಳಿಸಿಕೊಡುವಂತೆ ಬೇಡಿಕೋ. ನನಗೆ ನನ್ನ ಕೆಲಸ ಮಾಡಲು ಬಿಡು."



"ನಾವು ಆ ಕಷ್ಟದ ಭಾಗವಾಗದೇ ಇದ್ದಾಗ, ಅದಕ್ಕೆ ಸಾಂತ್ವನ ಹೇಳೋದು ತುಂಬಾ ಸುಲಭ. ನಾವೇ ಆ ಕಷ್ಟಕ್ಕೆ ಸಿಲುಕಿದಾಗ ಅದರ ಭಾರ ಅರ್ಥವಾಗೋದು" ತಂದೆಯ ಗೊಣಗಾಟ ಮುಂದುವರೆದೇ ಇತ್ತು. ಅದನ್ನು ಲೆಕ್ಕಿಸದ ವೈದ್ಯ ಶಸ್ತ್ರಚಿಕಿತ್ಸಾ ಕೊಠಡಿಯೊಳಗೆ ನುಗ್ಗಿದ. ಬಾಗಿಲು ಮುಚ್ಚಿಕೊಂಡಿತು. ಕೆಂಪುದೀಪ ಉರಿಯಲು ಮೊದಲ್ಗೊಂಡಿತು.

ಶಸ್ತ್ರಚಿಕಿತ್ಸೆ ಮುಗಿಯುವುದಕ್ಕೆ ಹಲವು ಗಂಟೆಗಳೇ ತಗುಲಿತು. ಕೊನೆಗೆ ಮುಚ್ಚಿದ ಬಾಗಿಲನ್ನು ತಳ್ಳಿಕೊಂಡು ವೈದ್ಯ ಹೊರಬಂದ. ಅವನ ಮುಖದ ಮೇಲೆ ಮತ್ತದೇ ಅವಸರವಿತ್ತು.

"ನೋಡಿದ್ಯಾ, ನಾನೇಳಲಿಲ್ಲವೇ. ಆ ಕಾಣದ ಶಕ್ತಿ ನಿನ್ನ ಕೈಬಿಡಲಿಲ್ಲ. ಆಪರೇಷನ್ ಯಶಸ್ವಿಯಾಗಿ ಮುಗಿದಿದೆ. ಈಗ ನಿನ್ನ ಮಗ ಪ್ರಾಣಾಪಾಯದಿಂದ ಪಾರಾಗಿದ್ದಾನೆ" ಅದೇನನ್ನೋ ಹೇಳಬರುತ್ತಿದ್ದ ತಂದೆಯನ್ನು ತಡೆದು ವೈದ್ಯ ತನ್ನ ಮಾತು ಮುಂದುವರೆಸಿದ. "ನೋಡು, ಮತ್ತೇನಾದರು ಕೇಳುವುದಿದ್ದರೆ ಸಿಸ್ಟರ್ ಬರುತ್ತಾರೆ. ಅವರನ್ನೇ ಕೇಳು!!" ಎಂದವರೇ ಬಂದಷ್ಟೇ ಧಾವಂತದಲ್ಲಿ ಅಲ್ಲಿಂದ ಖಾಲಿಯಾದರು.

ಆ ತಂದೆಗೆ ವಿಪರೀತ ಬೇಸರವಾಯಿತು. ಹಿಂದೆಯೇ ನರ್ಸ್ ಬಂದು ನಿಂತದ್ದನ್ನು ಕಂಡು, "ಇವನೇಕೆ ಇಷ್ಟು ತಾಳ್ಮೆಗೆಟ್ಟವನಂತೆ ವರ್ತಿಸುತ್ತಿದ್ದಾನೆ. ನನ್ನ ಮಗನ ಸ್ಥಿತಿಗತಿ ಬಗ್ಗೆ ಕೊಂಚ ತಿಳಿದುಕೊಳ್ಳೋಣ ಎಂದರೆ ಅದಕ್ಕೂ ಪುರುಸೊತ್ತಿಲ್ಲದಂತೆ ಓಡುತ್ತಿದ್ದಾನಲ್ಲಾ? ಹಣದ ಹಿಂದೆ ಬಿದ್ದವರ ಧಾವಂತವೇ ಇಂತದ್ದು. ಇವರಿಗೆ ರೋಗಿಗಳ ಜೀವಕ್ಕಿಂತ ದುಡ್ಡೇ ದೊಡ್ಡದು. ಛೇ!" ಎಂದು ಮೂದಲಿಸಿದ.

ನರ್ಸ್ ಮೌನವಾಗೇ ನಿಂತಿದ್ದಳು. ಅವಳ ಕಣ್ಣಿಂದ ನೀರು ಜಾರಿ ಕೆನ್ನೆಯ ಮೇಲೆ ಹರಿಯುತ್ತಿದ್ದವು. ಭಾರವಾದ ದನಿಯೊಂದು ಅವಳಿಂದ ಹೊರಬಿತ್ತು. "ಅವರ ಮಗ ನಿನ್ನೆಯಷ್ಟೇ ನಡೆದ ಆಕ್ಸಿಡೆಂಟ್‌ನಲ್ಲಿ ಸತ್ತು ಹೋದ, ಪಾಪ! ನಾವು ಅವರಿಗೆ ಫೋನ್ ಮಾಡಿದಾಗ ತಮ್ಮ ಮಗನ ಅಂತ್ಯಕ್ರಿಯೆಯ ದುಃಖದ ಮಡುವಿನಲ್ಲಿದ್ದರು. ನಿನ್ನ ಮಗನ ಆಪರೇಷನ್ ತುರ್ತನ್ನು ಹೇಳುತ್ತಿದ್ದಂತೆಯೇ ಆ ಕೆಲಸವನ್ನು ಅರ್ಧಕ್ಕೆ ಬಿಟ್ಟು ಬಂದಿದ್ದರು. ನಿನ್ನ ಮಗನ ಜೀವ ಉಳಿಸಿದರು. ಈಗವರು ತಮ್ಮ ಮಗನ ಅಂತಿಮ ವಿದಾಯಕ್ಕೆ ಹೋಗುತ್ತಿದ್ದಾರೆ!!"

ಆ ತಂದೆಯ ಗಂಟಲು ಹಿಂಗಿಹೋಗಿತ್ತು. ತನ್ನ ಮಗನನ್ನು ನೋಡುವುದಕ್ಕೂ ಚೈತನ್ಯವಿಲ್ಲದೇ ಕುರ್ಚಿಯಲ್ಲಿ ಕುಸಿದು ಕುಳಿತ.

* * * *



## ಕೃತಿಕಾರರ ಪರಿಚಯ :



**ಗಿರೀಶ್ ತಾಳಿಕಟ್ಟೆ** ಇವರು ಚಿತ್ರದುರ್ಗ ಜಿಲ್ಲೆಯ ತಾಳಿಕಟ್ಟೆಯಲ್ಲಿ ೧೯೮೪ ರಲ್ಲಿ ಜನಿಸಿದರು. ದಂತ ವೈದ್ಯಕೀಯ ಪದವೀಧರರಾದ ಇವರು 'ಹಲ್ಲು ಮತ್ತು ವಸಡು; ಕಾರಣ ಪರಿಹಾರ', 'ವೈದ್ಯ ಪದಗಳ ಅರ್ಥ ವಿವರಣಾ ಕೋಶ', 'ಮೆಂಟಲ್ ಹೆಲ್ತ್ ಟಿಪ್ಸ್' ಮುಂತಾದ ಆರೋಗ್ಯ ವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳನ್ನೂ 'ಟರ್ನಿಂಗ್ ಪಾಯಿಂಟ್', 'ವಿಚಾರ ವಿನಿಮಯ', 'ಎಸ್.ಎಸ್.ಎಲ್.ಸಿ. ನಂತರ ಮುಂದೇನು?' ಮುಂತಾದ ವ್ಯಕ್ತಿತ್ವ ವಿಕಸನ ಮತ್ತು ವೃತ್ತಿ ಮಾರ್ಗದರ್ಶನ ಕೃತಿಗಳನ್ನೂ 'ಜೆನ್ ಕಥೆಗಳು', 'ಕಾಡುವ ಕಥೆಗಳು' ಎಂಬ ಕಥಾಸಂಕಲನಗಳನ್ನೂ ಬರೆದಿದ್ದಾರೆ.

ಪ್ರಸ್ತುತ 'ಅಂತಿಮ ವಿದಾಯ' ಗದ್ಯ ಭಾಗವನ್ನು ಅವರ 'ಕಾಡುವ ಕಥೆಗಳು' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅಂತ್ಯಕ್ರಿಯೆ** – ಉತ್ತರ ಕ್ರಿಯೆ
**ಗೊಣಗಾಟ** – ಆಕ್ಷೇಪಿತ ಅಸ್ಪಷ್ಟ ಮಾತು.
**ದೌಡಾಯಿಸು** – ಓಡುವುದು; ಅವಸರ.
**ಪಣಕ್ಕಿಡು** – ಪ್ರತಿಜ್ಞೆ; ಭರವಸೆ.
**ಪುರುಸೊತ್ತು** – ಬಿಡುವು; ವಿರಾಮ.
**ಮಡು** – ಆಳ; ಗುಂಡಿ.
**ವಿದಾಯ** – ಬೀಳ್ಕೊಡು
**ಸಾಂತ್ವನ** – ಸಮಾಧಾನ; ಸಂತೈಸು.
**ಅನುವು** – ಅವಕಾಶ
**ತುರ್ತು** – ಜರೂರು; ಬೇಗನೇ; ಈ ಕ್ಷಣ.
**ಧಾವಂತ** – ಆತುರ
**ಪಾರಾಗು** – ಬಿಡುಗಡೆಯಾಗು
**ಬಚಾವು** – ಕಾಪಾಡು; ರಕ್ಷಿಸು.
**ಮೂದಲಿಸು** – ಹೀಯಾಳಿಸು
**ಶತಪಥ** – ಅತ್ತಿಂದಿತ್ತ ನಡೆದಾಡುವುದು
**ಹರಿಹಾಯಿ** – ಕೋಪಗೊಳ್ಳು; ರೇಗುವುದು.



### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ವೈದ್ಯನ ನಡಿಗೆಯಲ್ಲಿ ಧಾವಂತವಿತ್ತು ಏಕೆ?
೨. ಆಪರೇಷನ್ ಕೊಠಡಿಯ ಬಳಿ ಇದ್ದ ತಂದೆಯ ಮುಖದಲ್ಲಿ ಯಾವ ಆತಂಕವಿತ್ತು?
೩. ಸಾವಿನ ಬಗ್ಗೆ ವೈದ್ಯರು ಏನೆಂದು ಹೇಳಿದರು?
೪. ವ್ಯಕ್ತಿಗೆ ಕಷ್ಟದ ಭಾರ ಅರ್ಥವಾಗುವುದು ಯಾವಾಗ?
೫. ವೈದ್ಯರು ಆಪರೇಷನ್ ಮುಗಿಸಿ ಅವಸರದಿಂದ ಮನೆಗೆ ತೆರಳಿದ್ದು ಏಕೆ?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಆಪರೇಷನ್ ಥಿಯೇಟರ್‌ನತ್ತ ದೌಡಾಯಿಸಿದ ವೈದ್ಯನ ಮೇಲೆ ರೋಗಿಯ ತಂದೆ ಏನೆಂದು ಹರಿಹಾಯ್ದನು?
೨. ವೈದ್ಯರು ಆಕ್ರೋಶದಲ್ಲಿದ್ದ ರೋಗಿಯ ತಂದೆಯನ್ನು ಏನೆಂದು ವಿನಂತಿಸಿಕೊಂಡರು?
೩. ವೈದ್ಯರು ರೋಗಿಯ ತಂದೆಗೆ ಏನೆಂದು ಭರವಸೆ ನೀಡಿದರು?
೪. ಆಪರೇಷನ್ ಮುಗಿಸಿ ಹೊರನಡೆದ ವೈದ್ಯರನ್ನು ರೋಗಿಯ ತಂದೆ ಏನೆಂದು ಮೂದಲಿಸಿದನು?
೬. ನರ್ಸ್ ರೋಗಿಯ ತಂದೆಗೆ ಏನು ಹೇಳಿದಳು?

ಇ) ಕೆಳಗಿನ ಪ್ರಶ್ನೆಗಳಿಗೆ ಏಳು-ಎಂಟು ವಾಕ್ಯಗಳಲ್ಲಿ ಉತ್ತರಿಸಿರಿ.

೧. ವೈದ್ಯ ಹಾಗೂ ರೋಗಿಯ ತಂದೆಯ ನಡುವೆ ಯಾವ ಮಾತುಕತೆಗಳು ನಡೆದವು?

೨. ವೈದ್ಯರ ಯಾವ ಗುಣಗಳು ನಿಮಗೆ ಮೆಚ್ಚುಗೆಯಾದವು? ಏಕೆ?

ಈ) ಕೆಳಗಿನ ಮಾತಗಳನ್ನು ಯಾರು ಯಾರಿಗೆ ಹೇಳಿದರು? ವಿವರಿಸಿರಿ.

೧. ಇಲ್ಲಿಗೆ ಬರುವುದಕ್ಕೆ ನಿಮಗೆ ಇಷ್ಟೊತ್ತು ಬೇಕಾಯಿತೇ?

೨. ಹಣದ ಹಿಂದೆ ಬಿದ್ದವರ ಧಾವಂತವೇ ಇಂತಹದ್ದು.

೩. ಈಗವರು ತಮ್ಮ ಮಗನ ಅಂತಿಮ ವಿದಾಯಕ್ಕೆ ಹೋಗುತ್ತಿದ್ದಾರೆ.

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಧಾವಂತ :______________________

೨. ಸಾಂತ್ವನ :______________________

೩. ಪಾರಾಗು :______________________

೪. ಮೂದಲಿಸು :______________________

೫. ಆಕ್ರೋಶ :______________________

೬. ವಿದಾಯ :______________________

ಆ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

| | |
|---|---|
| ೧. ರೋಗಿ x ________ | ೨. ದುಃಖ x ________ |
| ೩. ಶಕ್ತಿ x ________ | ೪. ಶಾಂತ x ________ |
| ೫. ಸಾವು x ________ | ೬. ಅಂತಿಮ x ________ |
| ೭. ಅಸಹನೆ x ________ | ೮. ಪ್ರಾಮಾಣಿಕ x ________ |

ಇ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

೧. ತಾಳ್ಮೆಗೆಟ್ಟ = ______ + ______

೨. ಪ್ರಾಣಾಪಾಯ = ______ + ______

೩. ಮತ್ತೇನಾದರು = ______ + ______

೪. ಪಣಕ್ಕಿಡು = ______ + ______

೫. ಬೇಸರವಾಯಿತು = ______ + ______

ಈ) ಕೆಳಗೆ ನೀಡಿದ ಅನ್ಯದೇಶೀಯ ಪದಗಳಿಗೆ ಸಮಾನಾಂತರ ಕನ್ನಡ ಪದಗಳನ್ನು ಬರೆಯಿರಿ.

**ಮಾದರಿ :** ನರ್ಸ್ – ದಾದಿ

೧. ಫೋನ್ – ______    ೨. ರೂಂ – ______

೩. ಆಪರೇಷನ್ – ______    ೪. ಆಕ್ಸಿಡೆಂಟ್ – ______

೫. ಥಿಯೇಟರ್ – ______    ೬. ಸಿಸ್ಟರ್ – ______



* * * * *

ಪದ್ಯ – ೧೪

# ಜಾಣ ಆಮೆ




– ಭಾಸ್ಕರ ನೆಲ್ಯಾಡಿ

**ಪದ್ಯ ಪ್ರವೇಶ :** ಮಕ್ಕಳೇ, ಕೆಲವರು ನಮ್ಮ ಚಲನ ವಲನ ಗಮನಿಸಿ ಅಪಹಾಸ್ಯ ಮಾಡುವುದುಂಟು. ಅಂತಹ ಸನ್ನಿವೇಶದಲ್ಲಿ ಬೇಸರಗೊಳ್ಳುವುದು ಇಲ್ಲವೇ ಕೋಪಗೊಳ್ಳುವುದು ದುರ್ಬಲ ಮನಸ್ಸಿನ ಸಂಕೇತ. ನಮ್ಮನ್ನು ಗೇಲಿ ಮಾಡಿದವರ ಮೇಲೆ ಕೋಪಗೊಳ್ಳದೆ ಜಾಣತನದಿಂದ ತಾಳ್ಮೆಯಿಂದ ವರ್ತಿಸಬೇಕು. ಗೇಲಿ ಮಾಡಿದವರು ತಮ್ಮ ತಪ್ಪನ್ನು ತಾವೇ ಅರಿಯುವಂತೆ ಮಾಡಬೇಕು. ಇಲ್ಲಿ ಜಾಣ ಆಮೆಯೊಂದು ಪಡ್ಡೆ ಹುಡುಗರನ್ನು ಹೇಗೆ ತೆಪ್ಪಗಾಗಿಸಿತು ಎಂಬುದನ್ನು ತಿಳಿಯೋಣ.

ಕೊಳದಲಿರುವ ಆಮೆಗೊಂದು ಆಸೆ ಮೂಡಿತು
ಬಳಿಯಲಿರುವ ಹಂಸಗಳಲಿ ಸಂಗ ಬೆಳೆಸಿತು
ಮನದಲಿರುವ ಬಯಕೆಯನ್ನು ಹೇಳತೊಡಗಿತು
ಹಕ್ಕಿಯಂತೆ ಬಾನಲೊಮ್ಮೆ ಹಾರಲೆಂದಿತು

ಹಂಸವೆರಡು ಆಮೆಯೊಡನೆ ದಡಕೆ ಬಂದವು
ಉದ್ದವಾದ ಕೋಲನೊಂದ ಹೆಕ್ಕಿ ತಂದವು
ಆಮೆಯನ್ನು ಕೋಲ ಮಧ್ಯೆ ಕಚ್ಚು ಎಂದವು
ಅತ್ತ ಇತ್ತ ಕೊಕ್ಕಿನಲ್ಲಿ ಎತ್ತಿಕೊಂಡವು



ಕಾಲುಕೊಟ್ಟು ರೆಕ್ಕೆಬಡಿದು ಹಾರತೊಡಗಿತು
ಬಾನಿನಲ್ಲಿ ಆಮೆಯಣ್ಣ ಸಾಗತೊಡಗಿತು
ತಂಪಗಾಳಿ ಮೋಡಕಂಡು ಹರುಷಗೊಂಡಿತು
ಸನಿಹದಿಂದ ಸೂರ್ಯನನ್ನು ಕಂಡೆನೆಂದಿತು

ಇತ್ತ ಬಯಲಿನಲ್ಲಿ ಪಡ್ಡೆ ಹುಡುಗರಿದ್ದರು
ಹಾರುತಿರುವ ಆಮೆಯನ್ನು ಅವರು ಕಂಡರು
ಬೀಳಬೇಕು ಆಮೆಯಣ್ಣ ಎಂದು ಕೊಂಡರು
ಕಲ್ಲು ಹಾರುತಿದೆ ಎಂದು ಕಿರುಚಿ ಕೊಂಡರು

ಮೇಲೆ ಬಾನಿನಲ್ಲಿ ಆಮೆ ಸಿಟ್ಟುಗೊಂಡಿತು
ಕೋಲು ಕೈಯಲಿಡಿದುಕೊಂಡು ಬೈಯತೊಡಗಿತು
ಹೊಟ್ಟೆಕಿಚ್ಚನೆಂದು ನೀವು ಬಿಟ್ಟೀರೆಂದಿತು
ಮತ್ತೆ ಕೋಲು ಬಾಯಲಿಡಿದು ಟಾಟಾ ಅಂದಿತು

ಪಡ್ಡೆ ಹುಡುಗರೆಲ್ಲ ಇಲ್ಲಿ ಬೆಪ್ಪರಾದರು
ತಪ್ಪನರಿತುಕೊಂಡು ಎಲ್ಲ ತೆಪ್ಪಗಾದರು

* * * *



**ಕೃತಿಕಾರರ ಪರಿಚಯ :**



**ಭಾಸ್ಕರ ನೆಲ್ಯಾಡಿ** ಅವರು ೧೯೭೪ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕು ನೆಲ್ಯಾಡಿ ಗ್ರಾಮದಲ್ಲಿ ಜನಿಸಿದರು. ಇವರು ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದವರು. ಆಳ್ವಾಸ್ ಶಿಕ್ಷಕರ ತರಬೇತಿ ಸಂಸ್ಥೆ, ಮೂಡುಬಿದರೆ ಇಲ್ಲಿ ಚಿತ್ರಕಲಾ ಪ್ರಶಿಕ್ಷಕರಾಗಿ ಕೆಲಸಮಾಡುತ್ತಿದ್ದಾರೆ. "ಮಕ್ಕಳ ಕ್ರಿಯಾಶೀಲ ಚಿತ್ರಕಲೆ"ಗಾಗಿ ೨೦೦೬ ರಲ್ಲಿ ಪುತ್ತೂರು ತಾಲೂಕು ಮಕ್ಕಳ ಸಾಹಿತ್ಯ ಸಮ್ಮೇಳನದಲ್ಲಿ ಪ್ರಶಸ್ತಿ ದೊರಕಿದೆ.

'ಜಾಣ ಆಮೆ' ಇದು ಅವರ 'ಚಿಣ್ಣರ ಕಣ್ಣು' ಅಪ್ರಕಟಿತ ಕವನ ಸಂಗ್ರಹದಿಂದ ಆರಿಸಲಾಗಿದೆ.

# ಅಭ್ಯಾಸ

## I. ಪದಗಳ ಅರ್ಥ ತಿಳಿಯಿರಿ :

**ಕಿರುಚು** – ಚೀರು; ಒದರು; ಕೂಗು.

**ತೆಪ್ಪಗಾಗು** – ಸುಮ್ಮನಾಗು

**ಬಾನು** – ಆಕಾಶ; ಗಗನ.

**ಸಂಗ** – ಗೆಳೆತನ; ಸ್ನೇಹ.

**ಹೆಕ್ಕಿ** – ಆರಿಸಿ; ಹುಡುಕಿ.

**ಕೊಳ** – ಸರೋವರ

**ಪಡ್ಡೆ** – ಪ್ರಾಯಕ್ಕೆ ಬಂದವರು; ತರುಣರು.

**ಬೆಪ್ಪ** – ದಡ್ಡ; ಮೂರ್ಖ.

**ಹಂಸ** – ಒಂದು ಜಾತಿಯ ಪಕ್ಷಿ.

## II. ಪ್ರಶ್ನೆಗಳು :

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಕೊಳದಲ್ಲಿನ ಆಮೆಗೆ ಯಾವ ಆಸೆ ಮೂಡಿತು?

೨. ಆಮೆ ಹಂಸಗಳ ಸಂಗವನ್ನು ಏಕೆ ಬೆಳೆಸಿತು?

೩. ಬಾನಿನಲ್ಲಿ ಸಾಗಿದ ಆಮೆಗೆ ಏಕೆ ಸಿಟ್ಟು ಬಂತು?

೪. ಆಮೆ ಪಡ್ಡೆ ಹುಡುಗರಿಗೆ ಏನೆಂದು ಬೈದಿತು?

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಹಂಸಗಳು ಆಮೆಯನ್ನು ಬಾನಲ್ಲಿ ಒಯ್ಯಲು ಮಾಡಿದ ಉಪಾಯವೇನು?

೨. ಬಾನಿನಲ್ಲಿ ಸಾಗಿದ ಆಮೆಗೆ ಯಾವ ಅನುಭವಗಳಾದವು?

೩. ಆಮೆಯು ಪಡ್ಡೆ ಹುಡುಗರನ್ನು ಹೇಗೆ ಬೆಪ್ಪು ಮಾಡಿತು?

### ಇ) ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ.

೧. ಆಮೆಯು ______________ ಸಂಗ ಬೆಳೆಸಿತು.

೨. ಬಾನಿನಲ್ಲಿ ಸಾಗಿದ ಆಮೆಯು ಸನಿಹದಿಂದ ______________ ಕಂಡೆನೆಂದಿತು.

೩. ಪಡ್ಡೆ ಹುಡುಗರು ______________ ಬೀಳಬೇಕು ಎಂದುಕೊಂಡರು.

೪. ಆಮೆಯು ಪಡ್ಡೆ ಹುಡುಗರಿಗೆ ನೀವು ______________ ಎಂದು ಬಿಡುವಿರಿ ಎಂದಿತು.

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ಬಾನಲೊಮ್ಮೆ = ______ + ______

೨. ಆಮೆಗೊಂದು = ______ + ______

೩. ಬಯಕೆಯನ್ನು = ______ + ______

೪. ಹಂಸವೆರಡು = ______ + ______

೫. ಹಾರಲೆಂದಿತು = ______ + ______

**ಆ) ಕೆಳಗೆ ನೀಡಲಾಗಿರುವ ಪದಗಳ ಅರ್ಥ ವ್ಯತ್ಯಾಸ ಬರೆಯಿರಿ.**

**ಉದಾಹರಣೆ :** ಧನ – ದನ (ಧನ – ಹಣ ದನ – ಹಸು)

೧. ಕೊಳ – ಕೋಳ (ಕೊಳ – ______ ಕೋಳ – ______)

೨. ಬಾನು – ಭಾನು (ಬಾನು – ______ ಭಾನು – ______ )

೩. ಹಾರು – ಆರು (ಹಾರು – ______ ಆರು – ______ )

೪. ಮಧ್ಯ – ಮದ್ಯ (ಮಧ್ಯ – ______ ಮದ್ಯ – ______)

೫. ಮತ್ತೆ – ಮೆತ್ತೆ (ಮತ್ತೆ – ______ ಮೆತ್ತೆ – ______)

೬. ಹಕ್ಕಿ – ಹೆಕ್ಕಿ (ಹಕ್ಕಿ – ______ ಹೆಕ್ಕಿ – ______)

**ಇ) ಕೆಳಗಿನ ಶಬ್ದಗಳ ಹಿಂದೆ ಅಥವಾ ಮುಂದೆ ಒಂದು ಅಕ್ಷರ ಸೇರಿಸಿ, ಹೊಸ ಪದ ರಚಿಸಿರಿ.**

**ಮಾದರಿ :** __ ಸಂಗ. (ಪ್ರಸಂಗ)

೧. __ ಹಾರ

೨. __ ಮನ

೩. ಸಾಗ __

೪. ಕೊಳ __

**ಈ) 'ಜಾಣ ಆಮೆ' ಪದ್ಯದಲ್ಲಿನ ಪ್ರಾಸಪದಗಳನ್ನು ಪಟ್ಟಿ ಮಾಡಿರಿ.**

**ಉದಾ :** ಮೂಡಿತು – ಬೆಳೆಸಿತು

೧. ಬಂದವು –

೨. ಹಾರತೊಡಗಿತು –

೩. ಕಂಡರು –

೪. ಬೆಪ್ಪಾದರು –

೫. ಎಂದಿತು –

## IV. ಚಟುವಟಿಕೆಗಳು :

೧. ಪ್ರಾಣಿ ಪಕ್ಷಿಗಳನ್ನು ಕುರಿತಾದ ಕಥನ ಕವನಗಳನ್ನು ಓದಿರಿ.

೨. ಸಮಸ್ಯೆಗಳು ಬಂದಾಗ ಅವುಗಳನ್ನು ಜಾಣತನದಿಂದ ಹೇಗೆ ಪರಿಹರಿಸಬಹುದು ಎಂಬುದನ್ನು ತರಗತಿಯಲ್ಲಿ ಚರ್ಚಿಸಿರಿ.

೩. 'ಜಾಣ ಆಮೆ' ಕಥೆಯನ್ನು ನಿಮ್ಮದೇ ಮಾತುಗಳಲ್ಲಿ ವಿವರಿಸಿರಿ.

* * * *

ಪಾಠ – ೧೫

# ತರಕಾರಿಗಳ ಮೇಳ




**ಪಾಠ ಪ್ರವೇಶ :** ನಮಗೆ ತಿಳಿದಿರುವ ವಿಷಯವನ್ನು ಇತರರಿಗೆ ಮನಮುಟ್ಟುವಂತೆ ಹೇಳುವುದೂ ಒಂದು ಕಲೆ. ಇಲ್ಲಿ ತರಕಾರಿಗಳು ತಮ್ಮನ್ನು ಪರಿಚಯಿಸಿಕೊಳ್ಳುವ ಸಂದರ್ಭವನ್ನು ಕೊಡಲಾಗಿದೆ. ತರಕಾರಿಗಳ ಮಹತ್ವ ಅರಿತು, ಹೆಚ್ಚು ಸೇವಿಸುವ ಮೂಲಕ ನಮ್ಮ ಆರೋಗ್ಯವನ್ನು ಉತ್ತಮಪಡಿಸಿಕೊಳ್ಳಬೇಕು.

ಅಂದು ಎಪ್ರಿಲ್ ೭, ವಿಶ್ವ ಆರೋಗ್ಯ ದಿನಾಚರಣೆಯ ಅಂಗವಾಗಿ ತರಕಾರಿಗಳ ಮೇಳ ಏರ್ಪಟ್ಟಿತ್ತು. ಕಾರ್ಯಕ್ರಮದಲ್ಲಿ ತರಕಾರಿಗಳ ದಂಡೇ ಸೇರಿತ್ತು. ಎಲ್ಲಿ ನೋಡಿದರೂ ದವಸ–ಧಾನ್ಯ, ಸೊಪ್ಪು–ತರಕಾರಿ, ಹಣ್ಣು–ಹಂಪಲು, ಔಷಧಿ ಸಸ್ಯಗಳು, ಸಾಂಬಾರ ಪದಾರ್ಥಗಳ ಕಲರವ ತುಂಬಿತ್ತು.

ಅಲಂಕೃತವಾದ ವೇದಿಕೆಯ ಮೇಲೆ ಸೊಪ್ಪು ತರಕಾರಿಗಳು ಒಂದೊಂದಾಗಿಯೇ ಬಂದು ತಮ್ಮ ತಮ್ಮ ಗುಣ ವಿಶೇಷತೆಗಳ ಬಗೆಗೆ ನಿರರ್ಗಳವಾಗಿ ಮಾತನಾಡುತ್ತಿದ್ದವು. ಅವುಗಳ ಮಾತುಗಳನ್ನು ಕೇಳಿ ಸಭಿಕರು ಚಪ್ಪಾಳೆ ತಟ್ಟುತ್ತಿದ್ದರು. ಮೊದಲಿಗೆ ಹೀರೇಕಾಯಿ ವೇದಿಕೆಯನ್ನು ಏರಿತು.

### ೧. ಹೀರೇಕಾಯಿ :

“ಓ ನನ್ನ ಪ್ರೀತಿಯ ಸಹೋದರರೇ... ನಾನು ಯಾರು ಬಲ್ಲಿರಾ? ನನ್ನ ಮೈಬಣ್ಣ ಹಸಿರು. ನೋಡಿ ಮೈಯೆಲ್ಲಾ ಸುಕ್ಕುಗಟ್ಟಿದೆ. ನಾನು ಭಾರತದಲ್ಲಿಯೇ ಹುಟ್ಟಿದ್ದು. ಚಪ್ಪರದ ಬಳ್ಳಿಯಲ್ಲಿ ಜೋತು ಬೀಳುತ್ತೇನೆ. ನಾನೆಂದರೆ ನಿಮಗೆಲ್ಲಾ ತುಂಬಾ ಇಷ್ಟ. ನನ್ನ ಹೆಸರನ್ನು ಕೇಳಿದರೆ ಹಿರಿಹಿರಿ ಹಿಗ್ಗುತ್ತೀರಿ. ಈಗಲಾದರೂ ತಿಳಿಯಿತೇ ನಾನು ಯಾರೆಂದು? ನಾನೇ ಹೀರೇಕಾಯಿ. ನನ್ನಲ್ಲಿ ‘ಎ’ ಮತ್ತು ‘ಸಿ’ ಅನ್ನಾಂಗದ ಜೊತೆಗೆ ಖನಿಜಾಂಶವಿದೆ. ಪಲ್ಯ, ಸಾಂಬಾರು, ಬಜ್ಜಿ, ಗೊಜ್ಜುಗಳಲ್ಲಿ ನನ್ನನ್ನು ಬಳಸುತ್ತಾರೆ. ನಾನು ಜನರಿಗೆ ರುಚಿ ಹಾಗೂ ಆರೋಗ್ಯವನ್ನು ನೀಡುತ್ತೇನೆ” ಎಂದು ಹೇಳಿ ಸಭಿಕರಿಂದ ಜೋರಾದ ಚಪ್ಪಾಳೆಯನ್ನು ಗಿಟ್ಟಿಸಿತು.

### ೨. ಹೂಕೋಸು :

“ಇಲ್ಲಿ ಸೇರಿರುವ ಬಂಧುಗಳೇ, ಗೋಬಿಮಂಚೂರಿ ಎಂದರೆ ನಿಮಗೆ ಬಲು ಪ್ರೀತಿ ಅಲ್ಲವೇ. ತಿಂದಿದ್ದು ನೆನಪಿಗೆ ಬಂದು, ಬಾಯಲ್ಲಿ ನೀರೂ ಬಂದಿರಬಹುದಲ್ಲವೇ? ಇರಲಿ ವಿಷಯಕ್ಕೆ ಬರೋಣ. ನಾನಿಲ್ಲದೆ ಗೋಬಿಮಂಚೂರಿ ಸಿದ್ಧ ಆಗುವುದೇ ಇಲ್ಲ. ನಾವು ಮೂರು ಜನ ಸಹೋದರರು. ಗೆಡ್ಡೆಕೋಸು, ಎಲೆಕೋಸು ಮತ್ತು ಹೂಕೋಸು ಎಂದು ನಮ್ಮನ್ನು ಕರೆಯುತ್ತಾರೆ. ಸೂಪ್, ಹುಳಿ, ಪಲ್ಯ, ಪರೋಟ, ಗೋಬಿಮಂಚೂರಿ, ಪಕೋಡ ಮುಂತಾದ ಅಡುಗೆಗಳಿಗೆ ನಾವು ಬೇಕು. ನನ್ನ ಸೇವನೆಯಿಂದ ರಕ್ತ ಶುದ್ಧಿ ಹಾಗೂ ಚರ್ಮ ರೋಗಗಳು ದೂರವಾಗುತ್ತವೆ. ನಿಮ್ಮ ಸೇವೆಗೆ ನಾನು ಸದಾ ಸಿದ್ಧ. ನನ್ನನ್ನು ಸೇವಿಸಿ ಆರೋಗ್ಯದಿಂದಿರಿ” ಎಂದು ಹೇಳಿ ತನ್ನ ಮಾತನ್ನು ಮುಗಿಸಿತು.

### ೩. ಈರುಳ್ಳಿ :

"ಎಲ್ಲರಿಗೂ ನಮಸ್ಕಾರ, ಏಕೆ! ನನ್ನನ್ನು ನೋಡುತ್ತಿದ್ದಂತೆ ಕಣ್ಣು ಮುಚ್ಚಿದಿರಿ? ಕೊಯ್ದಾಗ ಮಾತ್ರ ಕಣ್ಣಿನಲ್ಲಿ ನೀರು ಬರುತ್ತದೆ ಎಂಬುದನ್ನು ಮರೆತಿರಾ? ನನ್ನ ತವರು ನೆರೆಯ ಚೀನಾ ದೇಶ. ಆದರೂ ಭಾರತದಲ್ಲಿ ವಾಣಿಜ್ಯ ಬೆಳೆಯಾಗಿ ಸ್ಥಾನ ಪಡೆದಿದ್ದೇನೆ. ನನ್ನನ್ನು ಇಂಗ್ಲಿಷ್‌ನಲ್ಲಿ ಆನಿಯನ್, ತೆಲುಗಿನಲ್ಲಿ ಎರ್ರಗಡ್ಡ, ತಮಿಳಿನಲ್ಲಿ ವೆಂಗಾಯಂ ಮತ್ತು ಕನ್ನಡದಲ್ಲಿ ಉಳ್ಳಾಗಡ್ಡಿ, ಈರುಳ್ಳಿ ಎಂದು ಕರೆಯುತ್ತಾರೆ. ನನ್ನಲ್ಲಿ ಆರೋಗ್ಯಕ್ಕೆ ಅಗತ್ಯವಾದ 'ಸಿ' ಜೀವಸತ್ವವಿದೆ. ಪಲ್ಯ, ಸಾಂಬಾರು, ಉಪ್ಪಿಟ್ಟು, ಕೋಸಂಬರಿ ಮುಂತಾದ ಅಡುಗೆಗಳಿಗೆ ನಾನು ಬೆರೆತರೆ ಆಹಾ! ಏನು ರುಚಿ" ಎಂದು ಹೇಳಿ ವೇದಿಕೆಯಿಂದ ನಿರ್ಗಮಿಸಿತು.






### ೪. ನುಗ್ಗೆ ಸೊಪ್ಪು :

"ಹಿರಿಯರೇ, ವೈದ್ಯರು ತರಕಾರಿಯ ಜೊತೆಗೆ ಸೊಪ್ಪು ಬಳಸಲು ಹೇಳುವುದನ್ನು ಕೇಳಿರಬಹುದಲ್ಲವೇ? ನಾನು ಮರದ ಮೇಲೆ ಇರುವವಳು. ಸೊಪ್ಪಿನ ಜೊತೆಗೆ ಕಾಯಿಯನ್ನೂ ನೀಡುತ್ತೇನೆ. ಯುಗಾದಿ ಹಬ್ಬದಲ್ಲಿ ನನ್ನನ್ನು ಬಹು ಪ್ರೀತಿಯಿಂದ ಕೊಂಡೊಯ್ಯುತ್ತಾರೆ. ನನ್ನನ್ನು ಖರೀದಿಸಲು ನೂಕು ನುಗ್ಗಲು ಏಕೆ? ಆಹಾ..ಅಹಾ.. ತಿಳಿಯಿತೇ ನಾನು 'ನುಗ್ಗೆ' ಎಂದು. ನನ್ನನ್ನು ಪಲ್ಯ, ಸಾಂಬಾರು ಮುಂತಾದ ಅಡುಗೆಗಳಲ್ಲಿ ಬಳಸುತ್ತಾರೆ. ನನ್ನಲ್ಲಿ ಕಬ್ಬಿಣ, ಕ್ಯಾಲ್ಸಿಯಂ ಜೊತೆಗೆ 'ಎ' ಮತ್ತು 'ಸಿ' ಜೀವಸತ್ವಗಳಿವೆ. ಮಕ್ಕಳ ಬೆಳವಣಿಗೆಗೆ ಸಹಕಾರಿಯಾಗಿದ್ದೇನೆ. ಇರುಳುಗಣ್ಣಿನ ತೊಂದರೆಯನ್ನು ನಿವಾರಿಸುತ್ತೇನೆ. ನಿಮ್ಮ ಮನೆ ಮತ್ತು ಶಾಲೆಯ ಆವರಣದಲ್ಲಿ ನನ್ನನ್ನು ಬೆಳೆಸಿರಿ. ಖರ್ಚಿಲ್ಲದೆ ಸದಾಕಾಲ ನುಗ್ಗೆಸೊಪ್ಪು ಮತ್ತು ನುಗ್ಗೆಕಾಯಿ ಕೊಡುತ್ತೇನೆ" ಎಂದು ಬಿನ್ನವಿಸಿತು.

೫. ಸೋರೆಕಾಯಿ :

ವೇದಿಕೆಯ ಮೇಲೆ ಆಜಾನುಬಾಹು ತರಕಾರಿಯೊಂದು ಏರಿತು. "ಮಾನ್ಯರೇ, ನಾನು ಸೋರೆಕಾಯಿ. ನನ್ನ ತವರು ಭಾರತ. ಹುಳಿ, ಕಡಬು, ಪಲ್ಯ, ಉಪ್ಪಿನಕಾಯಿ, ದೋಸೆ, ಹಲ್ವಾ ಮುಂತಾದ ಅಡುಗೆಗಳಿಗೆ ನನ್ನನ್ನು ಬಳಸುತ್ತೀರಿ. ಹಲವು ಪೌಷ್ಟಿಕಾಂಶಗಳ ಕಣಜವೇ ಆಗಿದ್ದೇನೆ. ನಾನು ಬಲಿತ ಮೇಲೆ ನನ್ನ ಹೊಟ್ಟೆಯೊಳಗಿನ ಬೀಜಗಳನ್ನು ಹೊರತೆಗೆದು, ಬುರುಡೆಯಾಕಾರದ ಹೊರ ಕವಚವನ್ನು ಒಣಗಿಸಿ ತಂಬೂರಿ ಮಾಡಿ ಗೀಗೀ ಪದಗಳನ್ನು ಆಡುತ್ತೀರಿ. ಸಂಗೀತಕ್ಕೆ ನನ್ನ ಕೊಡುಗೆ ಅಪಾರ. ಇದೋ ನಿಮಗೆ ನನ್ನ ನಮನ" ಎಂದು ಹೇಳಿ ವೇದಿಕೆಯಿಂದ ನಿರ್ಗಮಿಸಿತು.

೬. ಮೂಲಂಗಿ :

ಇತರರ ಮಾತುಗಳನ್ನು ಕೇಳಿದ ಮೂಲಂಗಿಗೆ ತನ್ನ ಪರಿಚಯ ಮಾಡಿಕೊಳ್ಳುವ ಬಯಕೆ ಉಂಟಾಯಿತು. ಗೆಳೆಯರಂತೆ ತಾನೂ ವೇದಿಕೆ ಏರಿ ಮಾತು ಆರಂಭಿಸಿತು. "ನನ್ನ ಹೆಸರು ಮೂಲಂಗಿ, ಬಣ್ಣ ಬಿಳಿ. ನನ್ನ ತವರು ಯೂರೋಪ್ ಮತ್ತು ಏಷ್ಯಾ. ನನ್ನಲ್ಲಿ ಎ.ಬಿ.ಸಿ. ಅನ್ನಾಂಗಗಳಿವೆ. ಪಲ್ಯ, ಸಾಂಬಾರು, ಮೊಸರು ಬಜ್ಜಿಗಳಲ್ಲಿ ಬಳಸುತ್ತಾರೆ. ಕೆಲವರು ನನ್ನ ಘಾಟುವಾಸನೆಯನ್ನು ಇಷ್ಟಪಡುವುದಿಲ್ಲ. ಇದರಿಂದ ನನಗೂ ಸ್ವಲ್ಪ ಬೇಸರವೇ" ಎಂದು ಹೇಳಿ ಎಲ್ಲರ ಚಪ್ಪಾಳೆ ಗಿಟ್ಟಿಸಿತು.

೭. ಕೊತ್ತಂಬರಿಸೊಪ್ಪು :

"ಹಿರಿಯರೇ, ಇತ್ತೀಚೆಗೆ ನನ್ನನ್ನು ಹುಡುಗಿಯರ ಜುಟ್ಟಿಗೆ ಹೋಲಿಸುತ್ತಾರೆ. ನನಗೇನೂ ಬೇಸರವಿಲ್ಲ. ಏಕೆಂದರೆ ನನಗೆ ಬಿಟ್ಟಿ ಪ್ರಚಾರ ಸಿಕ್ಕು, ಖ್ಯಾತಿ ಪಡೆದಿದ್ದೇನೆ. ನಾನು ಹುಡುಗಿಯರಂತೆ ಲಲಿತ ಮೃದು. ಅಷ್ಟೇ ಹಿತ. ನನ್ನ ಹೆಸರು ಕೊತ್ತಂಬರಿಸೊಪ್ಪು. ನಾನು ಎಲ್ಲಾ ಅಡುಗೆಗೂ ಬೇಕು. ವಡೆ, ಉಪ್ಪಿಟ್ಟು, ಚಿತ್ರನ್ನ, ಬಾತು, ಸಾಂಬಾರು, ಪಲ್ಯ, ಮಜ್ಜಿಗೆ.. ಹೀಗೆ ಒಂದೇ ಎರಡೇ ಎಲ್ಲಾ ತಿಂಡಿ ತಿನಿಸುಗಳಿಗೆ ಬೇಕು. ಕರಿಬೇವಿನಂತೆ ನಾನೂ ಸಹ ಪರಿಮಳದಿಂದ ಕೂಡಿದ್ದು ಅಡುಗೆಯ ರುಚಿಯನ್ನು ಹೆಚ್ಚಿಸುತ್ತೇನೆ. ನನ್ನಲ್ಲಿ ಅಧಿಕ ಪ್ರಮಾಣದ ಕಬ್ಬಿಣಾಂಶ ಇರುವುದನ್ನು ತಿಳಿಯಿರಿ. ಕಬ್ಬಿಣಾಂಶವು ರಕ್ತಹೀನತೆಯನ್ನು ತಡೆಯುತ್ತದೆ" ಎಂದು ಹೇಳಿ ತನ್ನ ಮಾತುಗಳನ್ನು ಮುಗಿಸಿತು.

ಕಾರ್ಯಕ್ರಮದ ಅಂತ್ಯದಲ್ಲಿ ಜನರು ಆರೋಗ್ಯವೇ ಭಾಗ್ಯ ಎಂದು ತಿಳಿದರು. ಹೆಚ್ಚು ಹೆಚ್ಚು ತರಕಾರಿಗಳನ್ನು ಕೊಂಡು ಮನೆಗೆ ತೆರಳಿದರು. ತರತರದ ಅಡುಗೆಗಳನ್ನು ಮಾಡಿ ಉಂಡರು. ಆರೋಗ್ಯವಂತರಾಗಿ ಬಾಳಿದರು. ವ್ಯಕ್ತಿಯ ಆರೋಗ್ಯದಲ್ಲಿ ದೇಶದ ಆರೋಗ್ಯವಿದೆ ಎಂಬುದನ್ನು ಸಾರಿದರು.

* * * *

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅಂಗ** – ಭಾಗ
**ಇರುಳುಗಣ್ಣು** – ಕತ್ತಲಾದಂತೆ ಕಣ್ಣು ಕಾಣದಿರುವುದು.
**ಕಲರವ** – ಮಧುರವಾದ ಧ್ವನಿ
**ಘಾಟು** – ಕಟುವಾಸನೆ
**ತವರು** – ಹುಟ್ಟಿದ ಮನೆ
**ನಮನ** – ವಂದನೆ; ನಮಸ್ಕಾರ.
**ಬಿಟ್ಟಿ** – ಪುಕ್ಕಟೆ; ಉಚಿತ.
**ಮೇಳ** – ಕೂಡುವಿಕೆ; ಗುಂಪು.
**ಆಜಾನುಬಾಹು** – ನೀಳವಾದ ತೋಳು ಉಳ್ಳವ.
**ಕಣಜ** – ಧಾನ್ಯವನ್ನು ಸಂಗ್ರಹಿಸುವ ಸ್ಥಳ.
**ಖ್ಯಾತಿ** – ಪ್ರಸಿದ್ಧಿ
**ತಂಬೂರಿ** – ತಂತಿವಾದ್ಯ
**ದಂಡು** – ಸೈನ್ಯ; ಗುಂಪು.
**ನೆರೆ** – ಪಕ್ಕದ
**ಭಿನ್ನವಿಸು** – ಕೋರಿಕೊಳ್ಳು; ಮನವಿ ಮಾಡು.
**ಸಭಿಕರು** – ಪ್ರೇಕ್ಷಕರು

### II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪ್ರತಿವರ್ಷ ವಿಶ್ವ ಆರೋಗ್ಯ ದಿನಾಚರಣೆಯನ್ನು ಎಂದು ಆಚರಿಸಲಾಗುತ್ತದೆ?
೨. ವಿಶ್ವ ಆರೋಗ್ಯ ದಿನಾಚರಣೆಯಲ್ಲಿ ಯಾವುದರ ಮೇಳ ಏರ್ಪಟ್ಟಿತ್ತು?
೩. ತರಕಾರಿಯ ಮೇಳದಲ್ಲಿ ಯಾರು ಯಾರು ಪಾಲ್ಗೊಂಡಿದ್ದರು?
೪. ಹೂಕೋಸಿನ ಸಹೋದರರು ಯಾರು?
೫. ಹೂಕೋಸು ಯಾವ ರೋಗಗಳನ್ನು ದೂರಮಾಡುತ್ತದೆ?
೬. ಈರುಳ್ಳಿಯನ್ನು ಇಂಗ್ಲಿಷ್, ತೆಲುಗು, ತಮಿಳು ಮತ್ತು ಕನ್ನಡದಲ್ಲಿ ಏನೆಂದು ಕರೆಯುತ್ತಾರೆ?
೭. ತರಕಾರಿಗಳ ಕಬ್ಬಿಣಾಂಶ ಯಾವ ಕೊರತೆಯನ್ನು ನಿವಾರಿಸುತ್ತದೆ?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಹೀರೇಕಾಯಿ ತನ್ನನ್ನು ಹೇಗೆ ಪರಿಚಯಿಸಿಕೊಂಡಿತು?
೨. ಸೋರೆಕಾಯಿ ತನ್ನ ವಿಶೇಷತೆಯ ಬಗ್ಗೆ ಏನೆಂದು ಹೇಳಿತು?
೩. ನುಗ್ಗೆಸೊಪ್ಪಿನ ಪ್ರಯೋಜನಗಳೇನು?
೪. ಕೊತ್ತಂಬರಿ ಸೊಪ್ಪನ್ನು ಯಾವ ಯಾವ ಅಡುಗೆಗಳಿಗೆ ಬಳಸುತ್ತಾರೆ?
೫. ತರಕಾರಿಗಳ ಮೇಳದಿಂದ ಜನರಿಗಾದ ಪ್ರಯೋಜನಗಳೇನು?

**ಇ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. "ಗೋಬಿಮಂಚೂರಿ ಎಂದರೆ ನಿಮಗೆ ಬಲು ಪ್ರೀತಿ ಅಲ್ಲವೇ".

೨. ಏಕೆ! ನನ್ನನ್ನು ನೋಡುತ್ತಿದ್ದಂತೆ ಕಣ್ಣು ಮುಚ್ಚಿದಿರಿ?

೩. ನಾನು ಮರದ ಮೇಲೆ ಇರುವವಳು.

೪. "ಸಂಗೀತಕ್ಕೆ ನನ್ನ ಕೊಡುಗೆ ಅಪಾರ".

**ಈ) ಟಿಪ್ಪಣಿ ಬರೆಯಿರಿ.**

೧. ಆರೋಗ್ಯವೇ ಭಾಗ್ಯ.

೨. ಹಸಿರು ತರಕಾರಿಗಳ ಸೇವನೆ.

**ಉ) ತರಕಾರಿಗಳನ್ನು ಅವುಗಳ ಬಣ್ಣದೊಂದಿಗೆ ಹೊಂದಿಸಿ ಬರೆಯಿರಿ.**

| | | |
|---|---|---|
| ೧) ಹೀರೇಕಾಯಿ | ಅ) ಹಳದಿ | ________________ |
| ೨) ಮೂಲಂಗಿ | ಆ) ನೇರಳೆ | ________________ |
| ೩) ಕ್ಯಾರೆಟ್ | ಇ) ಹಸಿರು | ________________ |
| ೪) ಟಮೋಟ | ಈ) ಬಿಳಿ | ________________ |
| ೫) ಬೀಟ್ರೂಟ್ | ಉ) ಕೇಸರಿ | ________________ |
| ೬) ನಿಂಬೆ | ಊ) ಕೆಂಪು | ________________ |

**ಊ) ತರಕಾರಿಗಳನ್ನು ಅವುಗಳ ರುಚಿಯೊಂದಿಗೆ ಹೊಂದಿಸಿ ಬರೆಯಿರಿ.**

| | | |
|---|---|---|
| ೧) ಮೆಣಸಿನಕಾಯಿ | ಅ) ಸಿಹಿ | ________________ |
| ೨) ಮೂಲಂಗಿ | ಆ) ಹುಳಿ | ________________ |
| ೩) ನಿಂಬೆ | ಇ) ಘಾಟು | ________________ |
| ೪) ಟಮೋಟ | ಈ) ಕಹಿ | ________________ |
| ೫) ಹಾಗಲಕಾಯಿ | ಉ) ಖಾರ | ________________ |

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ದಿನಾಚರಣೆ = ________ + ________
೨. ಒಂದೊಂದು = ________ + ________
೩. ಖನಿಜಾಂಶ = ________ + ________
೪. ಮೈಯೆಲ್ಲಾ = ________ + ________
೫. ಇರುಳುಗಣ್ಣು = ________ + ________
೬. ಪೌಷ್ಟಿಕಾಂಶ = ________ + ________
೭. ಬುರುಡೆಯಾಕಾರ = ________ + ________

**ಆ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ಆರೋಗ್ಯ x ________ ೨. ರುಚಿ x ________
೩. ರೋಗ x ________ ೪. ನಿರ್ಗಮಿಸು x ________
೫. ಶುದ್ಧಿ x ________ ೬. ಪೌಷ್ಟಿಕತೆ x ________



**ಇ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿ ಬರೆಯಿರಿ.**

೧. ಕಲರವ : ________________
೨. ಮೇಳ : ________________
೩. ಭಿನ್ನವಿಸು : ________________
೪. ಕಣಜ : ________________

## IV. ಚಟುವಟಿಕೆಗಳು :

೧. ಊಟದಲ್ಲಿ ಹೆಚ್ಚು ಹೆಚ್ಚು ತರಕಾರಿ ಮತ್ತು ಸೊಪ್ಪುಗಳನ್ನು ಬಳಸಿರಿ.
೨. ತರಕಾರಿಗಳ ಪಾತ್ರಗಳನ್ನು ಹಂಚಿಕೊಂಡು, ತರಕಾರಿಗಳು ಮಾತನಾಡಿದಂತೆ ಅಭಿನಯಿಸಿರಿ.
೩. ವಿವಿಧ ಸೊಪ್ಪು ಹಾಗೂ ತರಕಾರಿಗಳ ಪಟ್ಟಿ ತಯಾರಿಸಿ, ಅವುಗಳ ಮಹತ್ವ ತಿಳಿಯಿರಿ.

* * * * *

ಪಾಠ – ೧೬




# ಬಂಡೆದ್ದ ಮುಂಡರಗಿ ಭೀಮರಾಯ

(ಐತಿಹಾಸಿಕ ನಾಟಕ)

– ಡಾ. ನಿಂಗು ಸೊಲಗಿ

**ಪಾಠ ಪ್ರವೇಶ :** ಈಗಿನ ಗದಗ ಜಿಲ್ಲೆಯ ಮುಂಡರಗಿಯ ಭೀಮರಾಯನು ಬ್ರಿಟೀಷರ ನೌಕರನಾಗಿದ್ದರೂ ಅವರ ವಿರುದ್ಧ ಸಿಡಿದೆದ್ದವನು. ಸುಮಾರು ೨೦–೨೨ ನೆಯ ವಯಸ್ಸಿನಲ್ಲಿಯೇ ಬ್ರಿಟೀಷರ ದುರಾಡಳಿತವನ್ನು ಬಲ್ಲವನಾಗಿದ್ದ ಈತನಲ್ಲಿ ಸ್ವಾಭಿಮಾನ, ಜನಪರ ಒಲವು ಹುಟ್ಟುಗುಣವಾಗಿದ್ದು ಮುಂಡರಗಿ, ಕೊಪ್ಪಳ ಭಾಗಗಳಲ್ಲಿ ಜನಜಾಗೃತಿ ಮೂಡಿಸಿದ ಧೀಮಂತ ವ್ಯಕ್ತಿ. ರೈತರ ಹಿತಚಿಂತಕನಾಗಿ ಬ್ರಿಟೀಷರ ಅನ್ಯಾಯ, ಅಕ್ರಮ, ಅಮಾನವೀಯ ನಡೆ–ನುಡಿಗಳ ವಿರುದ್ಧ ಹೋರಾಟ ನಡೆಸಿ, ಅವರ ದಬ್ಬಾಳಿಕೆಯನ್ನು ಹತ್ತಿಕ್ಕಲು ಪ್ರಾಣವನ್ನು ಅರ್ಪಿಸಿದ ದೇಶಾಭಿಮಾನದ ಚಿತ್ರಣ ಈ ನಾಟಕದಲ್ಲಿ ಚಿತ್ರಿತಗೊಂಡಿದೆ.



## ದೃಶ್ಯ – ೧

(ಬ್ರಿಟೀಷ್ ಅಧಿಕಾರಿಯ ಕಾರ್ಯಾಲಯ. ಪಾಶ್ಚಾತ್ಯ ಸಂಗೀತದ ಹಿನ್ನೆಲೆ)

**ಬ್ರಿಟೀಷ್ ಅಧಿಕಾರಿ:** ಏನೀ ಅನಾಹುತ ರಾಯಚೂರ, ಧಾರವಾಡ ಕಲೆಕ್ಟರುಗಳು, ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕೊಪ್ಪಳ ಕೋಟೆ ಕಾಯುತ್ತಿದ್ದೇವೆ ಎಂದಿದ್ದರು, ಆದರೆ ಭೀಮರಾವ್–ಕೆಂಚನಗೌಡ ಬಂದಾಗ ಕಣ್ಣುಮುಚ್ಚಿ ಕುಳಿತಿದ್ದರೇನು?

**ಹ್ಯೂಜಿಸ್ :** ಸರ್, ನಮ್ಮ ಸೆಕ್ಯೂರಿಟಿ ಗಾರ್ಡ್ಸ್ ನಮಗೆ ವಿಶ್ವಾಸಘಾತ ಮಾಡಿದ್ದಾರೆ. ಮಕ್ತುಂ ಸಾಬ್ ಮತ್ತು ಅವನ ಸಂಗಡಿಗರು ನಮ್ಮಲ್ಲಿ ಕೆಲಸಕ್ಕಿದ್ದು ಅವರ ಪರವಾಗಿ ಕೆಲಸಮಾಡಿದ್ದಾರೆ. ಅವರೇ ಕೋಟೆಯ ಬಾಗಿಲು ತೆರೆದಿದ್ದಾರೆ.

**ಬ್ರಿಟೀಷ್ ಅಧಿಕಾರಿ:** ಮೇಜರ್ ಹ್ಯೂಜಿಸ್ ಈಗ ಸಮಯವೆಷ್ಟು?

**ಹ್ಯೂಜಿಸ್ :** Sir, it is 9.30 p.m. 30th May 1858 Sir.

**ಬ್ರಿಟೀಷ್ ಅಧಿಕಾರಿ:** ಐ.ಸೀ. ನೀವೀಗ ಇನ್ನೊಂದು ಗಂಟೆಯಲ್ಲಿ ಅಶ್ವದಳದೊಂದಿಗೆ ಇಲ್ಲಿಂದ ಹೊರಡಲು ಅನುವಾಗಿ. ನಾಳೆ ೩೧ ರ ಬೆಳಗ್ಗೆ ಇಲ್ಲಿಂದ ೨೬ ಮೈಲಿ ದೂರವಿರುವ ಕೊಪ್ಪಳಕ್ಕೆ ಹೋಗಿ ಕೋಟೆಯನ್ನು ವಶಕ್ಕೆ ತೆಗೆದುಕೊಳ್ಳಬೇಕು.

ಹ್ಯೂಜಿಸ್ : Yes Sir, But ನಮ್ಮ Soldiers ಕಡಿಮೆ ಇದ್ದಾರೆ. ಭೀಮರಾವ್ ಜೊತೆ ಹೇಗೆ Fight ಮಾಡುವುದು? ಅವರೊಂದಿಗೆ ಹೋರಾಡುವುದು ಸುಲಭವಲ್ಲ ಸರ್...

ಬ್ರಿಟೀಷ್ ಅಧಿಕಾರಿ: You'r Fool

ಹ್ಯೂಜಿಸ್ : No sir.... Yes Sir.

ಬ್ರಿಟೀಷ್ ಅಧಿಕಾರಿ: ನಿಮಗೆ ಅದರ ಚಿಂತೆ ಬೇಡ, ಮುಂದೆ ಹೋಗಿ ಪರಿಸ್ಥಿತಿ ಪರಿಶೀಲಿಸಿ. ಅಷ್ಟರಲ್ಲಿ ಲಿಂಗಸೂರಿನಿಂದ, ಹೈದರಾಬಾದಿನಿಂದ ಡೆಪ್ಯೂಟಿ ಕಮೀಷನರ್, ಲೆಫ್ಟಿನಂಟ್‌ಟೇಲರ್, ಕರ್ನೂಲಿನಿಂದ ಅಶ್ವದಳದ ಬಾಬುರಾವ್ ಮತ್ತು ಕೃಷ್ಣರಾವ್ ಬರುತ್ತಾರೆ. ಕ್ಯಾಪ್ಟನ್ ರುದರ್‌ಫೋರ್ಡ್ ಲೀಡರ್‌ಶಿಪ್‌ನಲ್ಲಿ ಹಾಯ್ ಲ್ಯಾಂಡರ್ಸ್ ಸೈನಿಕ ತುಕುಡಿ ಬರುತ್ತದೆ, ನೀವು ಮುಂದೆ ಹೋಗಿ.. Go, go ahead.

ಹ್ಯೂಜಿಸ್ : ರೈಟ್ ಸಾರ್, ಭೀಮರಾಯನನ್ನು ಖಂಡಿತ ಜೀವಂತ ಹಿಡಿದು ತರುತ್ತೇವೆ.

ಬ್ರಿಟೀಷ್ ಅಧಿಕಾರಿ: ಅವನು ಸಿಡಿಲು ಮರಿ..ಗೇರಿಲ್ಲಾ ಯುದ್ಧ ಪರಿಣಿತನಾದ ಅವನನ್ನು ಹಿಡಿಯಲು ಹೋದರೆ ಸಿಡಿಯುತ್ತಾನೆ, ತನ್ನವರನ್ನು ಹುರಿದುಂಬಿಸಿ ಬಾಂಬುಗಳಂತೆ ಸ್ಫೋಟಿಸುತ್ತಾನೆ. ಅವನು ಗುಂಡೇಟಿನ ಗುರಿಕಾರ. Sharp Shooter. ಎಚ್ಚರದಿಂದ ಹೊಂಚುಹಾಕಿ ಹಿಡಿದು ತನ್ನಿ.

ಹ್ಯೂಜಿಸ್ : Yes sir, We are going to arrest him, Yes sir.



**ದೃಶ್ಯ – ೨**

(ಕೊಪ್ಪಳ ಕೋಟೆ ಒಳಗಡೆ ಸೇನಾನಿಗಳ ಸಭೆ, ಹೊರಗೆ ಕೋಟೆ ಬುರುಜಿನ ಮೇಲೆ ಶಸ್ತ್ರ ಸಜ್ಜಿತರಾಗಿ ಕೆಲವು ಸೇನಾನಿಗಳು ಕಾಯುತ್ತಿದ್ದಾರೆ.)

ಭೀಮರಾಯ : ಸೇನಾನಿಗಳೇ, ನಿಮ್ಮ ಸಾಹಸ ಮೆಚ್ಚುವಂಥದ್ದು, ಬ್ರಿಟೀಷರನ್ನು ಬಗ್ಗುಬಡಿದು ಕೊಪ್ಪಳ ಕೋಟೆ ವಶಪಡಿಸಿಕೊಂಡು ಗೆಲುವಿನ ಬಾವುಟ ಹಾರಿಸಿದ್ದೀರಿ. ಆದರೆ ಇದಿನ್ನೂ ಹೋರಾಟದ ಪ್ರಾರಂಭ. ಬ್ರಿಟೀಷರು ನಮ್ಮ ನಾಡು ಬಿಟ್ಟು ತೊಲಗುವವರೆಗೂ ಹೋರಾಡೋಣ, ಕೆಚ್ಚೆದೆಯಿಂದ ಹೋರಾಡಲು ಸಜ್ಜಾಗಿರಿ.

ಕರಿಯಪ್ಪ : ನಾಳೆದಿವ್ಸ ಮತ್ತಷ್ಟು ಸೈನ್ಯ ಬರೊ ಸಾಧ್ಯತೆ ಐತಿ. ಬಹಳಷ್ಟು ಮದ್ದುಗುಂಡು ಇವತ್ತs ಬಳಕಿ ಆದ್ವು. ನಾಳೆ ಹ್ಯಾಂಗ್ರಿ ಧಣಿ.

ಕೆಂಚನಗೌಡ : ನನಗೂ ಅದs ಚಿಂತ್ಯಾಗೈತಿ, ಇವತ್ತ, ಬಲ್ಲಂಗ ಅವರ ಗುಂಡಿಗೆ ಪ್ರತಿಗುಂಡು ಹಾರ್ಸಿ ಬೆಚ್ಚಿ ಬೀಳಿಸಿದೀವಿ.

ಭೀಮರಾಯ : ಚಿಂತೀ ಮಾಡಿ ಪ್ರಯೋಜನಾ ಇಲ್ಲ. ನಾವು ಏಳು ಸುತ್ತಿನಕ್ವಾಟಿ ಒಳಗ ಅದೀವಿ. ಏನಾದ್ರೂ ತಂತ್ರ ಬಳಸಿ ಅವರ್ನ ಒಳಗ ಬರದಂಗ ನೋಡಕೋಬೇಕು. ಗುರಿ ಇಟ್ಟು ಬ್ರಿಟೀಷ್ ಅಧಿಕಾರಿಗಳ ಎದೀ ಸೀಳಬೇಕು. ಸ್ವಾತಂತ್ರ್ಯ ಅನ್ನೋದು ದೇಹಿ ಅಂತ ಬೇಡಿದರ ಸಿಗುವ ವಸ್ತು ಅಲ್ಲs ಹೋರಾಟಕ್ಕ ಇಳಿದೀವಿ. ಬ್ರಿಟೀಷ್‌ರ ಗುಂಡಿಗೆ ಬಲಿ ಆದ್ರೂ ಸರಿ, ಛಲ ಬಿಡೋದು ಬ್ಯಾಡ, ಸ್ವಾತಂತ್ರ್ಯ ತಗೊಂಡೇ ತೀರೋಣ.

ಕೆಂಚನಗೌಡ : ಆಯ್ತು ರಾಯರೆ... ಇಟ್ಟ ಹೆಜ್ಜೆ ತೆಗೆಯದಿರೋಣ ಹಿಂದಕ್ಕೆ.

(ತೆರೆ ಬೀಳುವುದು)

## ದೃಶ್ಯ – ೩

(ಕೋಟೆಯ ಹೊರಭಾಗ. ಗಲಿಬಿಲಿ ಗದ್ದಲ . . . ಗುಂಡು ಸಿಡಿಸಿದ ಸದ್ದು)

ಬ್ರಿಟೀಷ್ ಅಧಿಕಾರಿ : (ಪ್ರತಿಧ್ವನಿಸುವಂತೆ ವಿಶೇಷ ಧ್ವನಿಯಲ್ಲಿ) ಭೀಮರಾವ್ ಕೇಳು ಇನ್ನು ಮೂರು ಗಂಟೆಗಳಲ್ಲಿ ಕೋಟೆಯ ಒಳಗೆ ಇದ್ದವರೆಲ್ಲ ಹೊರಗೆ ಬಂದು. ಕೋಟೆಯನ್ನು Vacate ಮಾಡಿ surrender ಆಗದಿದ್ದರೆ ಗಂಭೀರ ಪರಿಣಾಮ ಎದುರಿಸಬೇಕಾದೀತು ಎಚ್ಚರ!

ಭೀಮರಾಯ : ಹೆ ಹ್ಞೆ..ನಿಮ್ಮ ಗೊಡ್ಡ ಬೆದರಿಕೀಗೆಲ್ಲ ಬೆದರಿ ಗೊತ್ತಿಲ್ಲ ಈ ಭೀಮರಾವ್‌ಗ. ನಮ್ಮ ಗುರಿ ಏನಿದ್ರೂ ಈ ನೆಲದಿಂದ ಅಟ್ಟೋದೊಂದೇ. ಗೆದ್ರೆ ಸ್ವಾತಂತ್ರ್ಯ, ಸತ್ತರ ವೀರಸ್ವರ್ಗ.

ಬ್ರಿಟೀಷ್ ಅಧಿಕಾರಿ : ಭೀಮರಾವ್.. ನೀನು ಸಾಗರಕ್ಕೆ ಸೇತುವೆ ಕಟ್ಟುವ ಸಾಹಸಕ್ಕೆ ಕೈ ಹಾಕಿದ್ದೀಯಾ. ನಿನ್ನ ಬಂಡಾಯದಿಂದ ಏನೂ ಪ್ರಯೋಜನವಿಲ್ಲ. ಬಾ ಹೊರಗೆ ಕೋಟೆ ಬಿಟ್ಟುಕೊಟ್ಟು. ಶರಣಾದ್ರೆ ನಿನಗೆ ಕಂಪನಿ ಸರಕಾರ ಉತ್ತಮ ಸ್ಥಾನ ನೀಡಿ ಚೆನ್ನಾಗಿ Treat ಮಾಡುತ್ತದೆ.



| | | |
|---|---|---|
| ಭೀಮರಾಯ | : | ಏಯ್ ಪರಂಗಿ..ದೀಪ ಬೆಳಗೋದು ತನಗಾಗಿ ಅಲ್ಲ. ಇತರರಿಗೆ ಬೆಳಕಾಗಲಿ ಅಂತ. ನಮ್ಮ ಹೋರಾಟ ನಮ್ಮ ಜೀವಕ್ಕಲ್ಲ. ನಿಮ್ಮ ದಾಸ್ಯದಿಂದ ಈ ನಾಡಿನ ಬಿಡುಗಡೆಗೆ ನಾವು ಇಟ್ಟ ಹೆಜ್ಜೆ ಹಿಂದಕ್ಕೆ ತೆಗೆಯೂದಿಲ್ಲ. ದಾಸ್ಯದ ಅರಮನೆಗಿಂತ ಸ್ವಾತಂತ್ರ್ಯದ ಸೆರೆಮನೆಯೇ ಲೇಸು. ಕ್ರಾಂತಿ ಎಂದೂ ಹಿಮ್ಮುಖವಾಗಿ ನಡೆಯೋದಿಲ್ಲ. ಜೈ ಕನಕರಾಯ. ಜೈ ಮೃಡಗಿರೀಶ..... |
| ಕೆಂಚನಗೌಡ | : | ಜೈ ವೀರಭದ್ರ... ಜೈ ಮೃಡಗಿರೀಶ.... (ಗುಂಡಿನ ಕಾಳಗ, ಸೈನಿಕರು ಉರುಳಿ ಬೀಳುವರು, ಕೆಂಚನಗೌಡನಿಗೆ ಗುಂಡೇಟು ಬೀಳುವುದು.) |
| ಕೆಂಚನಗೌಡ | : | ಹಾ....... ಅಯ್ಯೋ! |
| ಭೀಮರಾಯ | : | ಕೆಂಚನಗೌಡ!!... |
| ಕೆಂಚನಗೌಡ | : | ಭೀಮರಾಯರ... ಈ ಪರಂಗಿ ಗುಂಡು ನನ್ನ ಎದಿಯಾಗ ಹೊಕ್ತ್ರಿ, ಎದಿಯಾಗ ಹೊಕ್ತು, ಲೇ.. ಪರಂಗಿ ಪಾಪಿಗಳೆ, ನಿಮ್.. ನಿಮ್ಮ ಎದೀ ಸೀಳದೇ ಬಿಡೂದಿಲ್ಲ ನಮ್ಮ ಭೀಮರಾಯ.. ನಿಮ್ಮನ್ನs ಹ್ಹಾ ಹ್ಹಾ ಹ್ಹಾ.. |
| ಭೀಮರಾಯ | : | ಕೆಂಚನಗೌಡ್ರs... (ದುಃಖ) |
| ಬ್ರಿಟೀಷ್ ಅಧಿಕಾರಿ | : | ಭೀಮರಾವ್ ..ಈಗಲಾದರು ಶರಣಾಗು ನಿನಗೆ ಜೀವದಾನ ಮಾಡುತ್ತೇವೆ. |
| ಭೀಮರಾಯ | : | ಏನು! ..ನನಗ ಜೀವದಾನ ಮಾಡ್ತೀಯಾ? ಜೀವದಾನ.. ನನ್ನ ಸಂಗಾತಿಗಳ್ನ ಕೊಂದ ನಿಮ್ಮನ್ನ ಸುಮ್ನಬಿಡೂದಿಲ್ಲ. (ಗುಂಡು ಹಾರಿಸುವನು) |
| ಬ್ರಿಟೀಷ್ ಅಧಿಕಾರಿ | : | Fire… Fire… (ಗುಂಡುಗಳ ಸುರಿಮಳೆ) |
| ಭೀಮರಾಯ | : | ಹ್ಹಾ... ಪರಂಗಿ |

**ಬ್ರಿಟೀಷ್ ಅಧಿಕಾರಿ :** ಹಹ್ಹ... ಹಹ್ಹ... ಮುಂಡರಗಿ ಭೀಮರಾಯಗೆ ಗುಂಡು ಬಿತ್ತು. ಗೆಲವು ನಮ್ಮದೇ.

**ಭೀಮರಾಯ :** ಏ ... ಫರಂಗೀ ....ನಾನು ಸತ್ತರೂ ಈ ನೆಲದಾಗ ನಾವು ಹುಟ್ಟು ಹಾಕಿದ ಬಂಡಾಯಕ್ಕೆ ಸಾವಿಲ್ಲ. ಈ ನಾಡಿನ್ಯಾಗ ಈ ಬಂಡಾಯದ ಕಹಳೆ ಮೊಳಗತಾನೇ ಇರುತ್ತೆ, ಈ ಜನ ನಿಮ್ಮ ದಾಸ್ಯದಿಂದ ಮುಕ್ತರಾಗೋ ... ತನಕ ಹೋರಾಟ ನಡೀಸೇತೀರ್‍ತಾರ. ನಿಮ್ಮನ್ನ ಈ ನೆಲದಿಂದ ಓಡ್ಸಿ, ಭಾರತಮಾತೇನ ಸ್ವಾತಂತ್ರ ಮಾಡೇ ಮಾಡ್ತಾರಾ, ಹ್ಹಾ, ಹ್ಹಾ, ಹ್ಹಾ, ಜೈ ಮೃಡಗಿರೀಶ, ಜೈ ಕನಕರಾಯ, ಜೈ ಕನ್ನಡಾಂಬೆ, ಜೈ ಭಾರತಾಂಬೆ.

(ತೆರೆ ಬೀಳುವುದು)

* * * *

## ಕೃತಿಕಾರರ ಪರಿಚಯ :



ಡಾ. ನಿಂಗು ಸೊಲಗಿಯವರ ಪೂರ್ಣ ಹೆಸರು ನಿಂಬಪ್ಪ ಗುರುಲಿಂಗಪ್ಪ ಸೊಲಗಿ. ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಕೌಜಗೇರಿಯವರಾದ ಇವರು 'ನಿಂಗು ಸೊಲಗಿ' ಎಂಬ ಕಾವ್ಯನಾಮದಿಂದ ಸಾಹಿತ್ಯ ಲೋಕದಲ್ಲಿ ಪರಿಚಿತರು. ಇವರು ಮಕ್ಕಳ ರಂಗಭೂಮಿ ವಿಷಯಕ್ಕೆ ಸಂಬಂಧಿಸಿದಂತೆ ಪಿಹೆಚ್.ಡಿ. ಪದವಿ ಪಡೆದಿದ್ದಾರೆ. ಇವರು 'ಕನಸಿನ ಬಾಲೆ', 'ಬಾಳಜ್ಯೋತಿ', 'ಕರುಳಿನ ಗೆಳೆಯ' ಮೊದಲಾದ ನಾಟಕಗಳನ್ನು, 'ನಲಿಯುವ ಚಿಣ್ಣರು ನಾವು', 'ಮೂಡಣದ ಹಾಡುಗಳು' ಮುಂತಾದ ಕವನ ಸಂಕಲನಗಳನ್ನು ಹೊರ ತಂದಿದ್ದಾರೆ.

ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರು ವಿಶೇಷ ಶಿಕ್ಷಕ ರಾಜ್ಯ ಪ್ರಶಸ್ತಿ, ಧಾರವಾಡದ ಡೆಪ್ಯುಟಿ ಚನ್ನಬಸಪ್ಪ, ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನದ 'ಉತ್ತಮ ಸಾಹಿತಿ' ಪ್ರಶಸ್ತಿಗೆ ಭಾಜನರಾಗಿದ್ದಾರೆ. ಬಾನುಲಿಯಲ್ಲಿ ಪ್ರಸಾರಗೊಂಡ ಇವರ ಐತಿಹಾಸಿಕ ನಾಟಕ 'ಬಂಡೆದ್ದ ಮುಂಡರಗಿ ಭೀಮರಾಯ' ಕೃತಿಯ ಭಾಗದ ಸಂಕ್ಷಿಪ್ತ ರೂಪವನ್ನು ಇಲ್ಲಿ ನೀಡಲಾಗಿದೆ.

## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅನಾಹುತ** – ಆಕಸ್ಮಿಕ ಕೇಡು

**ಅಶ್ವದಳ** – ಕುದುರೆ ಸೇನೆ

**ಗೊಡ್ಡು ಬೆದರಿಕೆ** – ವ್ಯರ್ಥಗದರಿಕೆ

**ತಂತ್ರ** – ಉಪಾಯ

**ದೇಹಿ** – ದಯಪಾಲಿಸು; ಕೊಡು.

**ಪರಿಣತ** – ನುರಿತ; ತಿಳಿದವ; ಪಂಡಿತ.

**ಬಗ್ಗುಬಡಿ** – ಹತ್ತಿಕ್ಕು; ದಮನಮಾಡು.

**ಶರಣಾಗು** – ಮೊರೆಹೋಗು; ರಕ್ಷಣೆ.

**ಹಿಮ್ಮುಖ** – ಹಿಂದೆ ಸರಿಯುವುದು

**ಅಟ್ಟೋದು** – ಹೊರದೂಡುವುದು

**ಕೆಚ್ಚೆದೆ** – ಧೈರ್ಯಶಾಲಿ; ಸಾಹಸಿ.

**ಛಲ** – ಹಟ

**ದಾಸ್ಯ** – ಗುಲಾಮಗಿರಿ; ಚಾಕರಿ.

**ಪರಂಗಿ** – ವಿದೇಶಿ; ಪಾಶ್ಚಾತ್ಯ ದೇಶದವನು.

**ಬಂಡಾಯ** – ದಂಗೆ; ಕ್ರಾಂತಿ.

**ವಿಶ್ವಾಸಘಾತ** – ನಂಬಿಕೆ ದ್ರೋಹ

**ಸಜ್ಜಾಗು** – ಸಿದ್ಧನಾಗು

**ಹೊಂಚುಹಾಕು** – ಸಂಚುಹೂಡು

**ಟಿಪ್ಪಣಿ :**

೧. **ಗೆರಿಲ್ಲಾ ಯುದ್ಧ** – ಯಾವುದೇ ಮುನ್ಸೂಚನೆ ನೀಡದೆ ಮರೆಯಲ್ಲಿ ನಿಂತು ಶತ್ರುಗಳ ಮೇಲೆ ದಾಳಿ ಮಾಡುವುದು.

೨. **ಕಣ್ಣಲ್ಲಿ ಎಣ್ಣೆ ಹಾಕಿಕೊಂಡು** – ಜಾಗರೂಕತೆಯಿಂದ ಎಚ್ಚರವಾಗಿರುವುದು.

೩. **ಕಣ್ಣುಮುಚ್ಚಿ ಕುಳಿತಿರು** – ಮೈಮರೆತು ಇರುವುದು.

೪. **ಕಲೆಕ್ಟರುಗಳು** – ಬ್ರಿಟೀಷರ ಕಾಲದಲ್ಲಿದ್ದ ತೆರಿಗೆ ಅಧಿಕಾರಿಗಳು.

### II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಬ್ರಿಟೀಷ್ ಅಧಿಕಾರಿಗೆ ಯಾವ ಕೋಟೆಯನ್ನು ವಶಪಡಿಸಿಕೊಳ್ಳುವ ಉದ್ದೇಶವಿತ್ತು?

೨. ಭೀಮರಾಯ ಎಂತಹ ಯುದ್ಧದಲ್ಲಿ ಪರಿಣಿತನಾಗಿದ್ದನು?

೩. ಕೊಪ್ಪಳದ ಕೋಟೆಯಲ್ಲಿ ಬ್ರಿಟೀಷರಿಗೆ ವಿಶ್ವಾಸಘಾತ ಮಾಡಿದವರು ಯಾರು?

೪. ಭೀಮರಾಯನ ಹೋರಾಟದ ಗುರಿ ಏನಾಗಿತ್ತು?

೫. ಬ್ರಿಟೀಷ್ ಅಧಿಕಾರಿ ಭೀಮರಾಯನಿಗೆ ಶರಣಾಗಲು ಯಾವ ಆಮಿಷ ಒಡ್ಡಿದನು?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬ್ರಿಟೀಷ್ ಅಧಿಕಾರಿ ಭೀಮರಾಯನ ಶಕ್ತಿ ಸಾಮರ್ಥ್ಯಗಳ ಬಗ್ಗೆ ಏನೆಂದು ಹೇಳಿದನು?

೨. ಭೀಮರಾಯನು ತನ್ನ ಸೇನಾನಿಗಳಿಗೆ ಮೆಚ್ಚುಗೆಯಿಂದ ಹೇಳಿದ ಮಾತುಗಳಾವುವು?

೩. ಭೀಮರಾಯನು ತನ್ನ ಸೇನಾನಿಗಳಿಗೆ ಏನೆಂದು ಹುರಿದುಂಬಿಸಿದನು?

೪. ಬ್ರಿಟೀಷ್ ಅಧಿಕಾರಿ ಕೋಟೆಯನ್ನು ಮುತ್ತಿಗೆ ಹಾಕಿ ಭೀಮರಾಯನಿಗೆ ಏನೆಂದು ಎಚ್ಚರಿಕೆ ಕೊಟ್ಟನು?

೫. ಬ್ರಿಟೀಷ್ ಅಧಿಕಾರಿಯು ಶರಣಾಗು ಎಂದು ಹೇಳಿದ ಮಾತಿಗೆ ಭೀಮರಾಯನು ಏನೆಂದು ಪ್ರತಿಕ್ರಿಯಿಸಿದನು?

೬. ಭೀಮರಾಯನು ಸಾವಿನ ಸಂದರ್ಭದಲ್ಲಿ ಬ್ರಿಟೀಷ್‌ರ ವಿರುದ್ಧ ಏನೆಂದು ಬಂಡಾಯ ಸಾರಿದನು?

**ಇ) ಕೆಳಗಿನ ಹೇಳಿಕೆಗಳನ್ನು ಯಾರು ಯಾರಿಗೆ ಹೇಳಿದ್ದಾರೆ? ತಿಳಿಸಿರಿ.**

೧. "ಅವನು ಗುಂಡೇಟಿನ ಗುರಿಕಾರ."

೨. "ದಾಸ್ಯದ ಅರಮನೆಗಿಂತ ಸ್ವಾತಂತ್ರ್ಯದ ಸೆರೆಮನೆಯೇ ಲೇಸು."

೩. "ಬ್ರಿಟೀಷರು ನಮ್ಮ ನಾಡ ಬಿಟ್ಟು ತೊಲಗುವವರೆಗೂ ಹೋರಾಡೋಣ."

೪. "ನಮ್ಮ ಸಂಗಾತಿಗಳನ್ನು ಕೊಂದ ನಿಮ್ಮನ್ನ ಸುಮ್ನೆ ಬಿಡೋದಿಲ್ಲ!"

**ಈ) ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

೧. ಸ್ವಾತಂತ್ರ್ಯ ಅನ್ನೋದು ____________ ಅಂತ ಬೇಡಿದರೆ ಸಿಗುವ ವಸ್ತು ಅಲ್ಲ.

೨. ದೀಪ ಬೆಳಗೋದು ಇತರರಿಗೆ ____________ ಎಂದು.

೩. ಗೆದ್ದರೆ ಸ್ವಾತಂತ್ರ್ಯ, ಸತ್ತರೆ ____________

೪. ದಾಸ್ಯದ ಅರಮನೆಗಿಂತ ____________ ಸೆರೆಮನೆಯೇ ಲೇಸು.

## III. ಭಾಷಾಭ್ಯಾಸ :

**ಅ) ಕೆಳಗಿನವುಗಳಿಗೆ ವಿರುದ್ಧ ಪದಗಳನ್ನು ಬರೆಯಿರಿ.**

೧. ಸುಲಭ x ____________ ೨. ಗೆಲ್ಲು x ____________

೩. ಪ್ರಾರಂಭ x ____________ ೪. ಸ್ವಾತಂತ್ರ್ಯ x ____________

೫. ಪರ x ____________ ೬. ಹಿಂದಕ್ಕೆ x ____________

**ಆ) ಇಲ್ಲಿ ನೀಡಿರುವ ಪದಗಳನ್ನು ಗ್ರಾಂಥಿಕ ರೂಪದಲ್ಲಿ ಬರೆಯಿರಿ.**

**ಉದಾಹರಣೆ :** ಕ್ವಾಟೆ – ಕೋಟೆ

೧. ಐತಿ – ____________ ೨. ಆದ್ವು – ____________

೩. ಆಗ್ಯೈತಿ – ____________ ೪. ಬರದಂಗ – ____________

೫. ಬ್ಯಾಡ – ____________ ೬. ತಗೊಂಡೇ – ____________

## IV. ಚಟುವಟಿಕೆಗಳು :

೧. ಐತಿಹಾಸಿಕ ಹಾಗೂ ಸ್ವಾತಂತ್ರ್ಯ ಸಂಗ್ರಾಮದ ನಾಟಕಗಳನ್ನು ಸಂಗ್ರಹಿಸಿ ಓದಿರಿ.

೨. ಪ್ರಸ್ತುತ ನಾಟಕವನ್ನು ಶಿಕ್ಷಕರ ಮಾರ್ಗದರ್ಶನದಲ್ಲಿ ಪಾತ್ರಗಳನ್ನು ಹಂಚಿಕೊಂಡು ಅಭಿನಯಿಸಿರಿ.

## V. ಸೈದ್ಧಾಂತಿಕ ವ್ಯಾಕರಣ :

**ಕ್ರಿಯಾಪದ :** ಕ್ರಿಯೆಯನ್ನು ಸೂಚಿಸುವ ಪದವೇ **"ಕ್ರಿಯಾಪದ"**. ಕ್ರಿಯಾಪದದ ಮೂಲ ರೂಪವೇ **'ಧಾತು'**. ಈ ಕೆಳಗಿನ ಉದಾಹರಣೆಗಳಲ್ಲಿ ಗೆರೆ ಎಳೆದಿರುವ ಪದಗಳನ್ನು ಗಮನಿಸಿ.

೧. ವೈಭವಿಯು ಮಧುರವಾಗಿ **ಹಾಡುತ್ತಾಳೆ.**

೨. ರಾಹುಲ್ ಶುದ್ಧವಾಗಿ **ಬರೆಯುತ್ತಾನೆ.**

೩. ಹಸು ಹಾಲು **ಕೊಡುತ್ತದೆ.**

ಮೇಲಿನ ಉದಾಹರಣೆಗಳಲ್ಲಿ ಹಾಡುತ್ತಾಳೆ, ಬರೆಯುತ್ತಾನೆ, ಕೊಡುತ್ತದೆ ಇವುಗಳು ಕ್ರಿಯಾಪದಗಳು. ಹಾಡುತ್ತಾಳೆ ಎನ್ನುವ ಕ್ರಿಯಾಪದದ ಮೂಲರೂಪ **'ಹಾಡು'**. ಅದೇರೀತಿ ಬರೆಯುತ್ತಾನೆ ಎನ್ನುವ ಕ್ರಿಯಾಪದದ ಮೂಲರೂಪ **'ಬರೆ'**. ಕೊಡುತ್ತದೆ ಎನ್ನುವುದರ ಮೂಲರೂಪ **'ಕೊಡು'** ಇವುಗಳನ್ನು ಧಾತು ಎನ್ನುತ್ತೇವೆ.

**ಕೆಳಗಿನ ಕ್ರಿಯಾಪದಗಳಿಗೆ ಧಾತು ಪದ ಬರೆಯಿರಿ.**

| ಕ್ರಿಯಾಪದ | ಧಾತು |
|---|---|
| ೧. ಮಾಡುತ್ತಾನೆ | ____________ |
| ೨. ಓಡುತ್ತದೆ | ____________ |
| ೩. ಹೋದಳು | ____________ |
| ೪. ತಿಂದನು | ____________ |

* * * * *

ಪದ್ಯ – ೧೭




# ಸರ್ವಜ್ಞನ ವಚನಗಳು

**ಪದ್ಯ ಪ್ರವೇಶ :** ಗುರುಹಿರಿಯರನ್ನು ಗೌರವಿಸಬೇಕು. ಅವರಲ್ಲಿ ಶ್ರದ್ಧಾಭಕ್ತಿಗಳನ್ನು ಇರಿಸಿಕೊಳ್ಳಬೇಕು. ಏಕೆಂದರೆ, ಗುರು ಅಜ್ಞಾನದ ಕತ್ತಲನ್ನು ದೂರಮಾಡಿ ಸುಜ್ಞಾನದ ಬೆಳಕನ್ನು ನೀಡುತ್ತಾನೆ. ತಂದೆತಾಯಿಗಳು ನಮ್ಮ ಶ್ರೇಯಸ್ಸಿಗೆ ಹಗಲಿರುಳು ದುಡಿಯುತ್ತಾರೆ. ಹೀಗಾಗಿ ಗುರುಹಿರಿಯರನ್ನು, ತಂದೆ ತಾಯಿಗಳನ್ನು ಗೌರವಿಸುವ ಸುಸಂಸ್ಕೃತಿಯನ್ನು ವಿದ್ಯಾರ್ಥಿಗಳು ಬಾಲ್ಯದಿಂದಲೇ ರೂಢಿಸಿಕೊಳ್ಳಬೇಕು.

**ಹರ ತನ್ನೊಳಿರ್ದು, ಗುರು ತೋರದೇ ತಿಳಿವುದೆ?**
**ಮರದೊಳಗೆ ಅಗ್ನಿ ಇರುತಿರ್ದು। ತನ್ನ**
**ತಾನರಿಯಬೇಕೆಂದ ಸರ್ವಜ್ಞ॥**

**ಬಂಧುಗಳು ಆದವರು ಬಂದುಂಡು ಹೋಗುವರು**
**ಬಂಧನವ ಕಳೆಯಲರಿಯರು । ಗುರುವಿಂದ**
**ಬಂಧುಗಳು ಉಂಟೆ ಸರ್ವಜ್ಞ ॥**





ಗುರುವಿಂದ ಬಂಧುಗಳು, ಗುರುವಿಂದ ದೈವಗಳು
ಗುರುವಿಂದಲಿಹುದು ಪುಣ್ಯವದು । ಜಗಕೆಲ್ಲ
ಗುರುವಿಂದ ಮುಕ್ತಿ ಸರ್ವಜ್ಞ॥

ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎರಗಿದರೆ
ನರಸುರರು ಬಂದು ಸಿರಿಸುರಿದು। ಕೈಲಾಸ
ಕರತಲಾಮಲಕ ಸರ್ವಜ್ಞ॥

– ಸರ್ವಜ್ಞ

## ಕೃತಿಕಾರರ ಪರಿಚಯ :

**ಸರ್ವಜ್ಞನ** ಕಾಲವನ್ನು ಅವನ ವಚನಗಳ ಆಧಾರದಿಂದ ಕ್ರಿ.ಶ. ೧೫ ರಿಂದ ೧೬ ನೇ ಶತಮಾನಗಳ ನಡುವಿನ ಅವಧಿ ಎಂದು ಹೇಳಲಾಗಿದೆ. ಸರ್ವಜ್ಞನ ಹುಟ್ಟೂರು **ಅಂಬಲೂರು.** ಈಗಿನ ಹಾವೇರಿ ಜಿಲ್ಲೆಯ ಅಬ್ಬಲೂರು. ಈತನ ತಂದೆ **ಬಸವರಸ,** ತಾಯಿ **ಮಾಳಿ.** ಸರ್ವಜ್ಞನ ವಚನಗಳು ನೀತಿಪ್ರದವಾಗಿವೆ. ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಔಷಧಿಯಂತಿವೆ. ಸರ್ವಜ್ಞನು ಆಡುವ ನುಡಿಗಳಲ್ಲಿ ವಚನಗಳನ್ನು ತ್ರಿಪದಿಯಲ್ಲಿ ರಚಿಸಿದ್ದಾನೆ. ಸರ್ವಜ್ಞನ ವಚನಗಳನ್ನು ಮೊದಲಬಾರಿಗೆ ಉತ್ತಂಗಿ ಚನ್ನಪ್ಪನವರು ಸಂಗ್ರಹಿಸಿದ್ದಾರೆ.



## ಅಭ್ಯಾಸ

### I. ಪದಗಳ ಅರ್ಥ ತಿಳಿಯಿರಿ :

**ಅರಿ** – ತಿಳಿ
**ಅಗ್ನಿ** – ಬೆಂಕಿ
**ಇಹುದು** – ಇದೆ
**ಕಳೆ** – ನಾಶಮಾಡು
**ತನ್ನೊಳಗಿರ್ದು** – ತನ್ನ ಒಳಗೆ ಇರುವ
**ದೈವ** – ದೇವರು
**ಪುಣ್ಯ** – ಪವಿತ್ರ
**ಬಂಧುಗಳು** – ನೆಂಟರು; ಸಂಬಂಧಿಕರು.
**ಮುಕ್ತಿ** – ಬಿಡುಗಡೆ; ಮೋಕ್ಷ.
ಸಿರಿ – ಸಂಪತ್ತು
**ಹಿರಿಯರು** – ದೊಡ್ಡವರು
**ಅರಿಯರು** – ತಿಳಿಯರು
**ಆಮಲಕ** – ನೆಲ್ಲಿಕಾಯಿ
**ಎರಗು** – ನಮಸ್ಕರಿಸು
**ಜಗ** – ಲೋಕ.
**ತೋರದೆ** – ಕಾಣದೆ
**ನರ** – ಮಾನವ
**ಬಂಧನ** – ಕಟ್ಟು; ಸೆರೆಮನೆ.
**ಬಂಧನ** – ಸೆರೆ
**ಶಿರ** – ತಲೆ
**ಹರ** – ಶಿವ; ಶ್ರೇಷ್ಠತೆ; ದೈವೀಗುಣ.
**ಸುರ** – ದೇವತೆ

**ಟಿಪ್ಪಣಿ :**

೧. **ಮುಕ್ತಿ** – ಹುಟ್ಟು ಸಾವುಗಳ ಚಕ್ರದಿಂದ ಬಿಡುಗಡೆ ಹೊಂದುವುದು.
೨. **ಕೈಲಾಸ** – ಶಿವ ಪಾರ್ವತಿಯರು ನೆಲಸಿರುವರೆಂದು ನಂಬಿರುವ ಪರ್ವತ.
೩. **ಕರತಲಾಮಲಕ** – ಅಂಗೈ ಮೇಲಿರುವ ನೆಲ್ಲಿಕಾಯಿಯಂತೆ ಸ್ಪಷ್ಟಗೋಚರ.
೪. **ಸಿರಿ** – ಸಿರಿ ಎಂಬುದು ಲಕ್ಷ್ಮಿಯ ಇನ್ನೊಂದು ಹೆಸರು.
೫. **ಪುಣ್ಯ** – ಒಳ್ಳೆಯ ಕೆಲಸದಿಂದ ದೊರೆಯುವ ಫಲ.
೬. **ತ್ರಿಪದಿ** – ಮೂರು ಸಾಲಿನ ಪದ್ಯ.

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನಮ್ಮೊಳಗಿನ ಹರನನ್ನು ಯಾರು ತೋರುತ್ತಾರೆ?
೨. ಹರನು ನಮ್ಮೊಳಗೆ ಇರುವುದನ್ನು ಸರ್ವಜ್ಞ ಕವಿ ಯಾವುದಕ್ಕೆ ಹೋಲಿಸಿದ್ದಾನೆ?
೩. ತನ್ನನ್ನು ತಾನು ಅರಿಯುವುದು ಎಂದರೇನು?
೪. ಜಗಕೆ ಯಾರಿಂದ ಮುಕ್ತಿ ದೊರೆಯುವುದೆಂದು ಸರ್ವಜ್ಞ ಕವಿ ಹೇಳಿದ್ದಾನೆ?
೫. ಗುರುವಿಗಿಂತ ಬೇರೆ ಬಂಧುವಿಲ್ಲ ಏಕೆ?
೬. ಗುರುಹಿರಿಯರಿಗೆ ಹೇಗೆ ನಮಿಸಬೇಕು?
೭. ಸರ್ವಜ್ಞ ಕವಿಯ ಜನ್ಮಸ್ಥಳ ಯಾವುದು?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ತನ್ನ ತಾನು ಅರಿಯುವುದರಿಂದ ಪ್ರಯೋಜನಗಳೇನು?
೨. ಬಂಧುಗಳ ಸ್ವಭಾವ ಯಾವ ರೀತಿಯದು ಎಂದು ಸರ್ವಜ್ಞ ಕವಿ ಹೇಳಿದ್ದಾನೆ?
೩. ಗುರುವಿನ ಮಹಿಮೆಯನ್ನು ಸರ್ವಜ್ಞ ಕವಿ ಏನೆಂದು ಬಣ್ಣಿಸಿದ್ದಾನೆ?
೪. ಗುರುಹಿರಿಯರಿಗೆ ನಮಸ್ಕರಿಸುವುದರಿಂದ ಯಾವ ಫಲಗಳು ಸಿಗುತ್ತವೆ?

## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.**

೧. ಬಂಧು : ______________________________

೨. ಬಂಧನ : ______________________________

೩. ಪುಣ್ಯ : ______________________________

೪. ಮುಕ್ತಿ : ______________________________

೫. ಸಿರಿ : ______________________________

೬. ತಿಳಿವು : ______________________________

**ಆ) ಕೆಳಗಿನವುಗಳಿಗೆ ವಿರುದ್ಧ ಪದಗಳನ್ನು ಬರೆಯಿರಿ.**

೧. ಬಂಧನ x __________ ೨. ಪುಣ್ಯ x __________

೩. ಹಿರಿಯ x __________ ೪. ಜ್ಞಾನಿ x __________

**ಇ) ಕೆಳಗೆ ನೀಡಿರುವ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ:**

೧. ಅರಿ – __________ ೨. ನರ – __________

೩. ಶಿರ – __________ ೪. ಕರ – __________

೫. ಜಗ – __________ ೬. ಬಂಧು – __________

**ಈ) ಕೆಳಗೆ ನೀಡಿರುವ ಪದಗಳನ್ನು ಬಿಡಿಸಿ ಬರೆಯಿರಿ:**

೧. ಮರದೊಳಗೆ = __________ + __________

೨. ತಾನರಿಯ = __________ + __________

೩. ಬಂದುಂಡು = __________ + __________

೪. ಕಳೆಯಲರಿಯರು = __________ + __________

## IV. ಸೈದ್ಧಾಂತಿಕ ವ್ಯಾಕರಣ :

**ವಿಭಕ್ತಿ ಪ್ರತ್ಯಯಗಳು :** ನಾಮ ಪ್ರಕೃತಿ ಅಥವಾ ಸರ್ವನಾಮಗಳನ್ನು ಬೇರೊಂದು ಪದದೊಡನೆ ಜೋಡಿಸುವಾಗ ಬಳಸುವ ಪ್ರತ್ಯಯಗಳೇ ವಿಭಕ್ತಿ ಪ್ರತ್ಯಯಗಳು. ಇವುಗಳಲ್ಲಿ ಎಂಟು ವಿಧಗಳಿವೆ.

| ವಿಭಕ್ತಿ | ಪ್ರತ್ಯಯ | ನಾಮಪ್ರಕೃತಿ | ಪ್ರತ್ಯಯ | ನಾಮಪದ |
|---|---|---|---|---|
| ಪ್ರಥಮಾ | ಉ | ಮರ | ಉ | ಮರವು |
| ದ್ವಿತೀಯಾ | ಅನ್ನು | ಮರ | ಅನ್ನು | ಮರವನ್ನು |
| ತೃತೀಯಾ | ಇಂದ | ಮರ | ಇಂದ | ಮರದಿಂದ |
| ಚತುರ್ಥೀ | ಗೆ, ಕೆ, ಇಗೆ, ಅಕ್ಕೆ | ಮರ | ಗೆ, ಕೆ. | ಮರಕ್ಕೆ |
| ಪಂಚಮೀ | ದೆಸೆಯಿಂದ | ಮರ | ದೆಸೆಯಿಂದ | ಮರದದೆಸೆಯಿಂದ |
| ಷಷ್ಠೀ | ಅ | ಮರ | ಅ | ಮರದ |
| ಸಪ್ತಮೀ | ಅಲ್ಲಿ | ಮರ | ಅಲ್ಲಿ | ಮರದಲ್ಲಿ |
| ಸಂಬೋಧನಾ | ಏ, ಓ, ಇರಾ, ಈ | ಮರ | ಏ, ಓ, ಇರಾ | ಮರವೇ, ಮರಗಳಿರಾ |

**ಕೆಳಗೆ ನೀಡಿರುವ ನಾಮ ಪ್ರಕೃತಿಗಳಾದ ನದಿ, ರವಿ, ಮನೆ ಇವುಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಖಾಲಿ ಜಾಗದಲ್ಲಿ ಬರೆಯಿರಿ.**

**ನಾಮಪ್ರಕೃತಿಗಳು**

| ವಿಭಕ್ತಿ | ಪ್ರತ್ಯಯ | ನದಿ | ರವಿ | ಮನೆ |
|---|---|---|---|---|
| ಪ್ರಥಮಾ | ಉ | ನದಿಯು | | |
| ದ್ವಿತೀಯಾ | ಅನ್ನು | | | |
| ತೃತೀಯಾ | ಇಂದ | | | |
| ಚತುರ್ಥೀ | ಗೆ, ಕೆ, ಇಗೆ, ಅಕ್ಕೆ | | ರವಿಗೆ | |
| ಪಂಚಮೀ | ದೆಸೆಯಿಂದ | | | |
| ಷಷ್ಠೀ | ಅ | | | |
| ಸಪ್ತಮೀ | ಅಲ್ಲಿ | | | ಮನೆಯಲ್ಲಿ |
| ಸಂಬೋಧನಾ | ಏ, ಓ, ಇರಾ, ಈ | | | |

## V. ಚಟುವಟಿಕೆಗಳು :

೧. ಪ್ರಸ್ತುತ ಸರ್ವಜ್ಞನ ವಚನಗಳಲ್ಲಿನ ಕೊನೆಯ ಎರಡು ತ್ರಿಪದಿಗಳನ್ನು ಕಂಠಪಾಠ ಮಾಡಿರಿ.
೨. ಸರ್ವಜ್ಞನ ಇನ್ನಿತರ ತ್ರಿಪದಿಗಳನ್ನು ಸಂಗ್ರಹಿಸಿ ಓದಿರಿ.

* * * * *

**ಭಾಗ – ೩**

## ಪೂರಕ ಓದು

## ೧. ಗೆಳತಿಗೊಂದು ಪತ್ರ

ಇವರಿಂದ, ೫ ನೇ ಸೆಪ್ಟೆಂಬರ್ ೨೦೧೭

**ಸರಳಾ ಪಿ.ಕೆ.**

೭ ನೇ ತರಗತಿ, ಸ.ಹಿ.ಪ್ರಾ. ಶಾಲೆ,

ಆಳಂದ, ಕಲಬುರಗಿ ಜಿಲ್ಲೆ.

ನಲ್ಮೆಯ ಗೆಳತಿ ಸಹನಾಳಿಗೆ ವಂದನೆಗಳು,

ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ನನ್ನ ವ್ಯಾಸಂಗವೂ ಚೆನ್ನಾಗಿ ನಡೆಯುತ್ತಿದೆ. ನಿನ್ನ ಅಭ್ಯಾಸ, ಆರೋಗ್ಯ ಕುರಿತು ಪತ್ರವನ್ನು ಬರೆಯುತ್ತಾ ಇರು. ಅಂದ ಹಾಗೆ, ನನ್ನ ತಂದೆ ತಾಯಿ ಜೊತೆ ನಾಲ್ಕು ದಿನ ಬೆಳಗಾವಿಗೆ ಹೋಗಬೇಕಾದ ಆಕಸ್ಮಿಕ ಅವಕಾಶ ನನಗೆ ಬಂತು. ಆ ಕುರಿತು ನಿನಗೆ ತಿಳಿಸೋಣ ಎಂದು ಪತ್ರ ಬರೆಯುತ್ತಿದ್ದೇನೆ.

ನನಗೆ ಸಿಕ್ಕ ಮಾಹಿತಿ ಪ್ರಕಾರ, ಬೆಳಗಾವಿ ಪುರಾತನ ಕುಂತಳ ದೇಶದ ಭಾಗ. ಇಲ್ಲಿ ಅನೇಕ ಐತಿಹಾಸಿಕ ಕೋಟೆಗಳಿವೆ. ನಿಸರ್ಗ ರಮಣೀಯ ಸ್ಥಳಗಳಿವೆ. ಇಲ್ಲಿಯ ಬೆಟ್ಟ, ನದಿ, ಜಲಪಾತಗಳು, ಪ್ರವಾಸಿಗರನ್ನು ಕೈಬೀಸಿ ಕರೆಯುತ್ತವೆ. ಈ ಪ್ರವಾಸದಲ್ಲಿ ನನಗೆ ಇಲ್ಲಿಯ ಜಲಪಾತಗಳು ಹೆಚ್ಚು ಆಕರ್ಷಣೀಯವಾಗಿದ್ದವು.

ಮೊದಲಿಗೆ ನಾವು ಕರ್ನಾಟಕದ ಪ್ರಸಿದ್ಧ ಜಲಪಾತಗಳಲ್ಲಿ ಒಂದಾದ ಗೋಕಾಕ್ ಜಲಪಾತವನ್ನು ನೋಡಿದೆವು. ಇದು ಗೋಕಾಕ್ ಪಟ್ಟಣದಿಂದ ೬ ಕಿ.ಮೀ. ದೂರದಲ್ಲಿದೆ. ಜಲಪಾತವನ್ನು 'ದಬದಬೆ', 'ತಡಸಲು' ಎಂತಲೂ ಕರೆಯುತ್ತಾರೆ. ಈ ಜಲಪಾತವನ್ನು ನೋಡಲು ಎರಡು ಕಣ್ಣುಗಳೂ ಸಾಲದು. ಇಲ್ಲಿ ಘಟಪ್ರಭೆ ಕಲ್ಲು ಬಂಡೆಗಳನ್ನು ದಾಟುತ್ತಾ, ಬಳಕುತ್ತಾ ಬರುತ್ತಾಳೆ. ಇದೊಂದು ನಯನ ಮನೋಹರ ದೃಶ್ಯ. ಕುದುರೆ ಲಾಳಾಕಾರದಲ್ಲಿ ಸುಮಾರು ೧೮೦ ಅಡಿಗಳ ಎತ್ತರದಿಂದ ಧುಮುಕುವ ನೋಟವಂತೂ ನನ್ನನ್ನು ರೋಮಾಂಚನಗೊಳಿಸಿತು. ಇದು 'ಕರ್ನಾಟಕದ ನಯಾಗರ' ಎಂದು ಪ್ರಸಿದ್ಧವಾಗಿದೆ. ಕಪ್ಪುಕಲ್ಲು ಬಂಡೆಗಳ ಮೇಲೆ ಹಾಲಿನಂತೆ ಬಿಳಿನೊರೆಯಾಗಿ, ತುಂತುರು ತುಂತುರಾಗಿ ಮೇಲೆದ್ದು, ಹಿಂಜಿದ ಅರಳೆಯಂತೆ ಕಾಣುವ ದೃಶ್ಯ ನನ್ನನ್ನು ಮೂಕವಿಸ್ಮಿತಳನ್ನಾಗಿಸಿತು. ಈ ಜಲಪಾತದ ನೆತ್ತಿಯ ಮೇಲೆ ಸುಮಾರು ೨೦೧ ಮೀಟರ್ ಉದ್ದದ ತೂಗುಸೇತುವೆ ಇದೆ. ಅದರ ಮೇಲೆ ನಡೆದುಕೊಂಡು ಹೋಗುತ್ತ ಕೆಳಗೆ ಹರಿಯುವ ಘಟಪ್ರಭಾ ನದಿಯನ್ನು ನೋಡುವುದಂತೂ ವರ್ಣಿಸಲಾಗದ ಅನುಭವ.

ಗೋಕಾಕ್‌ನಿಂದ ಸುಮಾರು ೮ ಕಿಲೋಮೀಟರ್ ದೂರದಲ್ಲಿರುವ ಮತ್ತೊಂದು ಜಲಪಾತ ಯಾವುದು ಗೊತ್ತೆ? ಅದೆ ಗೊಡಚಿನಮಲ್ಕಿ ಜಲಪಾತ. ಇದು ಮಾರ್ಕಂಡೇಯ ನದಿಯಿಂದ ಉಂಟಾದುದರಿಂದ ಇದಕ್ಕೆ ಮಾರ್ಕಂಡೇಯ ಜಲಪಾತವೆಂದು ಹೆಸರಿದೆ. ಇದನ್ನು ತಲುಪಲು ಮುಖ್ಯ ರಸ್ತೆಯಿಂದ ಸುಮಾರು ೨.೫ ಕಿ.ಮೀ. ಕಾಡಿನ ಮಧ್ಯೆ ಹೋಗಬೇಕು. ಸಣ್ಣ ಪುಟ್ಟ ಸಾರಿಗೆ ವ್ಯವಸ್ಥೆ ಇದ್ದರೂ ನಾವು ನಿಸರ್ಗದ ಸೊಬಗನ್ನು ಸವಿಯಲು ನಡೆದುಕೊಂಡೇ ಹೋದೆವು. ಇಲ್ಲಿ ಮಾರ್ಕಂಡೇಯ ನದಿಯು ಎರಡು ಬಾರಿ ಧುಮುಕುತ್ತದೆ. ಮೊದಲನೆಯದು ೨೫ ಮೀಟರ್, ಎರಡನೆಯದು ೧೮ ಮೀಟರ್ ಎತ್ತರದಿಂದ ಧುಮುಕಿ ವಿಶಾಲವಾಗಿ ಹರಡಿ ಮೆಟ್ಟಿಲು ಮೆಟ್ಟಿಲುಗಳಾಗಿ ಇಳಿಯುತ್ತದೆ. ಹಾಲಿನ ನೊರೆಯನ್ನು ಸೃಷ್ಟಿಸುತ್ತಾ ಹರಿಯುವ ನೋಟ ನನ್ನ ಕಣ್ಮನ ಸೆಳೆದು ಮೈಮರೆಯುವಂತೆ ಮಾಡಿತು. ಎಷ್ಟು ನೋಡಿದರೂ ಸಾಲದೆನಿಸುವ ಈ ಜಲಪಾತ ಘೋಡಗೇರಿ ಬಳಿ ಘಟಪ್ರಭಾ ನದಿಯನ್ನು ಸೇರಿಕೊಳ್ಳುತ್ತದೆ.





ಮಧ್ಯಾಹ್ನ ನಾವು ಗೋಕಾಕ್ ಜಲಪಾತದ ಬಳಿಯಲ್ಲಿಯೇ ಊಟ ಮಾಡಿದೆವು. ನಂತರ ನಾವು ವಜ್ರಪೋಹ ಜಲಪಾತ ನೋಡಲು ಪ್ರಯಾಣ ಬೆಳೆಸಿದೆವು.

ಮಹಾದಾಯಿ ನದಿಯಿಂದ ಉಂಟಾದ ವಜ್ರಪೋಹ ಜಲಪಾತವು ಬೆಳಗಾವಿ ನಗರದಿಂದ ಸುಮಾರು ೫೮ ಕಿ.ಮೀ. ದೂರದಲ್ಲಿದೆ. ಪಶ್ಚಿಮ ಘಟ್ಟದ ದಟ್ಟ ಹಸಿರು ಕಾಡಿನ ನಡುವೆ ಸಾಗಿ ಬರುವ ಮಹಾದಾಯಿಯನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಸುಮಾರು ೨೦೦ ಅಡಿಗಳ ಆಳಕ್ಕೆ ಧುಮುಕುವಾಗ ಬಂಡೆಗಳಿಗೆ ಅಪ್ಪಳಿಸಿ ತುಂತುರು ತುಂತುರು ಹನಿಗಳಾಗಿ ಚಿಮ್ಮುತ್ತದೆ. ಪ್ರತಿಯೊಂದು ಹನಿಯ ಮೇಲೂ ಸೂರ್ಯನ ಕಿರಣಗಳು ಬಿದ್ದು, ಪ್ರತಿ ಹನಿಗೂ ವಜ್ರದ ಕಾಂತಿಯನ್ನು ತುಂಬುತ್ತಾನೆ. ಇಲ್ಲಿ ಸಹಸ್ರ ಹನಿಗಳು ವಜ್ರದಂತೆ ಫಳಫಳ ಹೊಳೆಯುತ್ತವೆ. ಈ ಕಾರಣದಿಂದ ಇದನ್ನು ವಜ್ರಪೋಹ ಜಲಪಾತವೆಂದು ಕರೆಯುವರು. ಇದು ಚಿತ್ತಾಕರ್ಷಕ ಸುಂದರ ಕಾಮನಬಿಲ್ಲನ್ನು ಸೃಷ್ಟಿಸಿ ನಿಸರ್ಗದ ಸೊಬಗಿಗೆ ಸರಿಸಮ ಮತ್ತೊಂದಿಲ್ಲ ಎಂಬುದನ್ನು ಸಾರುತ್ತದೆ. ಈ ಜಲಪಾತದ ಸುಂದರ ನೋಟವನ್ನು ಎಷ್ಟು ಸಲ ನೋಡಿದರೂ ಮತ್ತೆ ಮತ್ತೆ ನೋಡಬೇಕೆನಿಸುತ್ತದೆ.

ಈ ಜಲಪಾತಗಳ ನಿಸರ್ಗದ ಸವಿನೋಟವನ್ನು ನೋಡಿ ಮನಸ್ಸು ನವಿಲಿನಂತೆ ಗರಿಗೆದರಿ ಕುಣಿದಾಡಿ ವರ್ಣಿಸಲಾಗದ ಆನಂದವನ್ನು ಉಂಟುಮಾಡಿತು.

ನಮ್ಮ ಕನ್ನಡ ನಾಡಿನಲ್ಲಿ ಇನ್ನೂ ಅನೇಕ ಪ್ರಸಿದ್ಧ ಜಲಪಾತಗಳಿವೆ. ಅವಕಾಶ ಸಿಕ್ಕಾಗ ಅವುಗಳನ್ನು ವೀಕ್ಷಿಸಬೇಕು. ಮುಂಬರುವ ಬೇಸಿಗೆಯ ರಜೆಯಲ್ಲಿ ಇಬ್ಬರೂ ಸೇರಿ ಪ್ರವಾಸ ಹೋಗೋಣ. ಯಾವುದಕ್ಕೂ ನೀನು ಸಿದ್ಧವಾಗಿರು. ಪರೀಕ್ಷೆಗೆ ಸಿದ್ಧತೆ ನಡೆಸಬೇಕು. ನಿಮ್ಮ ತಂದೆ ತಾಯಿಗಳಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ಮುಂದಿನ ಬಾರಿ ಖಂಡಿತ ನಿಮ್ಮ ಊರಿಗೆ ಬರುತ್ತೇನೆ.

ಇಂತಿ ನಿನ್ನ ಪ್ರೀತಿಯ ಗೆಳತಿ

ಸರಳಾ ಕೆ.

**ಇವರಿಗೆ,**
ಕು. ಸಹನಾ ಎಂ.
೭ ನೇ ತರಗತಿ, ಅ ವಿಭಾಗ,
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ,
ರಾಯಚೂರು



**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಈ ಪತ್ರವನ್ನು ಯಾರು ಯಾರಿಗೆ ಬರೆದಿದ್ದಾರೆ?
೨. ಜಲಪಾತಕ್ಕೆ ಇರುವ ವಿವಿಧ ಹೆಸರುಗಳಾವುವು?
೩. ಗೋಕಾಕ ಜಲಪಾತ ಏನೆಂದು ಪ್ರಸಿದ್ಧವಾಗಿದೆ?
೪. ಗೊಡಚಿನಮಲ್ಕಿ ಜಲಪಾತಕ್ಕೆ ಇರುವ ಇನ್ನೊಂದು ಹೆಸರೇನು?
೫. ವಜ್ರಪೋಹ ಜಲಪಾತ ಯಾವ ನದಿಯಿಂದ ಉಂಟಾಗಿದೆ?
೬. ಗೊಡಚಿನಮಲ್ಕಿ ಜಲಪಾತಕ್ಕೆ ಮಾರ್ಕಂಡೇಯ ಜಲಪಾತವೆಂದು ಏಕೆ ಹೆಸರು ಬಂತು?
೭. ಮಹದಾಯಿ ನದಿ ನೋಡುವುದಕ್ಕೆ ಕಣ್ಣಿಗೆ ಹಬ್ಬವನ್ನು ಉಂಟುಮಾಡುತ್ತದೆ ಹೇಗೆ?
೮. ನೀವು ಪ್ರವಾಸ ಕೈಗೊಂಡ ಸ್ಥಳಗಳ ಮಹತ್ವ ಹಾಗೂ ನಿಮಗಾದ ಅನುಭವಗಳನ್ನು ಕುರಿತು ಗೆಳತಿಗೊಂದು ಪತ್ರ ಬರೆಯಿರಿ.

* * * * *

# ೨. ಶಿಕ್ಷಕನಿಗೊಂದು ಗುಡಿ

– ಚಿದ್ರೆ ಶಂಕರಯ್ಯಸ್ವಾಮಿ

ಅಥರ್ಗಾ ಎಂಬುದು ಒಂದು ಗ್ರಾಮ, ಇದು ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿದೆ. ಅಲ್ಲೊಂದು ಗುಡಿ. ಊರ ಜನರ ದೈನಂದಿಕ ಚಟುವಟಿಕೆ ಪ್ರಾರಂಭಗೊಳ್ಳುವುದು ಈ ಗುಡಿಯಲ್ಲಿಯ ಮೂರ್ತಿಯ ದರ್ಶನದ ನಂತರವೆ. ಹೆಂಗಳೆಯರೆಲ್ಲ ಕಾಯಿ ಕರ್ಪೂರದೊಂದಿಗೆ ಗುಡಿಗೆ ಹೋಗಿ ತಮ್ಮ ಮಕ್ಕಳ ಉಜ್ವಲ ಶಿಕ್ಷಣಕ್ಕಾಗಿ ಭಕ್ತಿಯಿಂದ ಬೇಡಿಕೊಳ್ಳುತ್ತಾರೆ. ಪ್ರದಕ್ಷಿಣೆ ಹಾಕುತ್ತಾರೆ. ಉರುಳು ಸೇವೆ ಮಾಡುತ್ತಾರೆ.

ಈ ಮೊದಲು ಅಥರ್ಗಾ ಒಂದು ಕೊಂಪೆ. ಅನಕ್ಷರತೆಯ ತವರು ಹಾಗೂ ದುರ್ಗುಣಗಳ ಬೀಡಾಗಿತ್ತು. ರೇವಣಸಿದ್ದಪ್ಪ ಮಾಸ್ತರರ ಆಗಮನದಿಂದ ಕೊಂಪೆ ಸಂಪಿಗೆಯಾಯಿತು. ಜನರನ್ನು ತಿದ್ದಿದರು, ತೀಡಿದರು. ದುಡಿಯಲು ಶಕ್ತಿ ನೀಡಿದರು. ಕತ್ತಲಿದ್ದ ಮನೆಗೆ ಬೆಳಕು ತಂದರು. ಈ ಬಗೆಗೆ ಇಂದಿಗೂ ಹಿರಿಯರು ಹಾಗೂ ವೃದ್ಧರು ಹಾಡಿ ಹೊಗಳುತ್ತಾರೆ. ಅವರು ಮಾಡಿ ತೋರಿಸಿದ್ದು ಒಂದೇ ಎರಡೇ! ಗ್ರಾಮಸುಧಾರಣೆ, ಯುವಕರಿಗೆ ಮಾರ್ಗ ದರ್ಶನ, ಕೃಷಿಯಲ್ಲಿ ಉತ್ತೇಜನ, ಮೂಢನಂಬಿಕೆ ವಿರುದ್ಧ ತಿಳಿವಳಿಕೆ, ಗುಡಿ ಕೈಗಾರಿಕೆ ಬಗ್ಗೆ ಕಲ್ಪನೆ ಮೂಡಿಸಿದರು. ಹೆಣ್ಣುಮಕ್ಕಳ ಸಮಾನತೆ, ಮದ್ಯವ್ಯಸನಿಗಳನ್ನು ವ್ಯಸನಮುಕ್ತರನ್ನಾಗಿಸಿದ್ದು ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇದರಿಂದ ಈ ಗ್ರಾಮ ಮಾದರಿ ಗ್ರಾಮವಾಯಿತು. ಗ್ರಾಮಕ್ಕೆ ಸೌಕರ್ಯಗಳು ಬರಲಾರಂಭಿಸಿದವು, ವ್ಯಾಜ್ಯಗಳು ನ್ಯಾಯಕಟ್ಟೆಯಲ್ಲಿಯೇ ತೀರ್ಮಾನಗೊಳ್ಳುತ್ತಿದ್ದವು. ಹೀಗೆ ಮಾಸ್ತರರು ಜನಸೇವೆಯಲ್ಲಿಯೇ ಕೊನೆಯುಸಿರೆಳೆದರು.

ಈಗ ಊರ ಮಧ್ಯದಲ್ಲಿಯೇ ಈ ಸಮಾಜಮುಖಿ ಮಾಸ್ತರರಿಗೊಂದು ಗುಡಿ. ಮಾಸ್ತರರ ಆಳೆತ್ತರದ ಪ್ರತಿಮೆ ಸ್ಥಾಪನೆಗೊಂಡಿತು. ನಿತ್ಯ ಎರಡು ಬಾರಿ ಪೂಜೆ. ಅದಕ್ಕೊಬ್ಬ ಅರ್ಚಕ. ಈ ಶಿಕ್ಷಕರಿಗಾಗಿ ಪ್ರತಿ ವರ್ಷ ಶಿವರಾತ್ರಿಯಂದು ಭಾರಿ ಜಾತ್ರೆ ನಡೆಯುತ್ತದೆ. ಮಾಸ್ತರರ ಮೂರ್ತಿಯನ್ನು

ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡುತ್ತಾರೆ. ಇಡೀ ರಾತ್ರಿ ಭಜನೆ, ಕೀರ್ತನೆ ನಡೆಯುತ್ತದೆ. "ಊರವರು ನಾವು ಮಾಸ್ತರರ ಜಾತ್ರೆ ಮಾಡ್ತೀವಿ. ಅವ್ರನ್ನ ನಾವು ದೇವರಂತ ನಂಬಿವ್ರಿ" ಎಂದು ಹೆಮ್ಮೆಯಿಂದ ಹೇಳುತ್ತಾರೆ.

"ಗುರುಬ್ರಹ್ಮ! ಗುರುವಿಷ್ಣು! ಗುರುದೇವೋ ಮಹೇಶ್ವರ" ಎಂಬ ಆರ್ಯೋಕ್ತಿ ಈ ದಿನಗಳಲ್ಲಿ ಸವಕಲಾಗಿದೆ. ಆದರೆ ಇಲ್ಲಿ ಈ ಮಾತುಗಳು ಜೀವಂತವಾಗಿವೆ. ಇದು ಸಾಮಾಜಿಕ ಮೌಲ್ಯದ ಪ್ರತೀಕವಲ್ಲವೇ?

**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ರೇವಣಸಿದ್ದಪ್ಪ ಮಾಸ್ತರರು ಅಥರ್ಗಾ ಗ್ರಾಮವನ್ನು ಹೇಗೆ ಸುಧಾರಣೆ ಮಾಡಿದರು?

೨. 'ನಾನು ಶಿಕ್ಷಕನಾದರೆ' ವಿಷಯ ಕುರಿತು ತರಗತಿಯಲ್ಲಿ ನಿಮ್ಮ ಚಿಂತನೆಗಳನ್ನು ಹಂಚಿಕೊಳ್ಳಿರಿ.

* * * * *